ಒಳಬದಿಯ ರಕ್ಷಾಪುಟದಲ್ಲಿ ಕಾಣಿಸಿರುವ ಶಿಲ್ಪಕಲೆಯಲ್ಲಿ ಮೂವರು ಭವಿಷ್ಯವಾದಿಗಳು ಭಗವಾನ್ ಬುದ್ಧನ ತಾಯಿ ರಾಣಿ ಮಾಯಾಳ ಕನಸನ್ನು ರಾಜ ಶುದ್ಧೋದನನಿಗೆ ವಿವರಿಸುವ ದೃಶ್ಯವಿದೆ. ಕೆಳಗೆ ಆ ವಿವರಣೆಯನ್ನು ಬರೆದುಕೊಡುತ್ತಿರುವ ಬರಹಗಾರ ಕುಳಿತಿದ್ದಾನೆ. ಬಹುಶಃ ಇದುವೇ ಭಾರತದ ಬರವಣಿಗೆಯ ಕಲೆಯನ್ನು ಕುರಿತ ಪ್ರಥಮ ಚಾರಿತ್ರಿಕ ದಾಖಲೆಯಾಗಿದೆ.

ನಾಗಾರ್ಜುನ ಕೊಂಡ - ಕ್ರಿ. ಶ. ಎರಡನೆಯ ಶತಮಾನ
ನ್ಯಾಷನಲ್ ಮ್ಯೂಸಿಯಂ, ನವದೆಹಲಿ

ಭಾರತೀಯ ಸಾಹಿತ್ಯ ನಿರ್ಮಾಪಕರು

# ಯಶಪಾಲ್

ಲೇಖಕರು:

**ಕಮಲಾ ಪ್ರಸಾದ್**

ಕನ್ನಡಿಸಿದವರು:

**ಎಚ್.ಎ.ರಾಮಚಂದ್ರ ರಾವ್:**

**ಸಾಹಿತ್ಯ ಅಕಾದೆಮಿ**

*YASHPAL:* A monograph by Kamala Prasad on the eminent Hindi writer, translated into Kannada by H.V. Ramachandra Rao. 1992 Rs 15.

**ISBN-81-7201-313-2**






First edition :1992

**ಸಾಹಿತ್ಯ ಅಕಾದೆಮಿ**

ಪ್ರಧಾನ ಕಾರ್ಯಾಲಯ:

ರವೀಂದ್ರ ಭವನ, ೩೫, ಫಿರೋಜ್‌ಶಾಹ್ ಮಾರ್ಗ,ನವದೆಹಲಿ-೧೧೦ ೦೦೧.

ಮಾರಾಟ ವಿಭಾಗ: 'ಸ್ವಾತಿ', ಮಂದಿರ್ ಮಾರ್ಗ, ನವದೆಹಲಿ-೧೧೦ ೦೦೧

**ಪ್ರಾದೇಶಿಕ ಕಾರ್ಯಾಲಯ:**

೧೦೯, ಎಡಿಎ ರಂಗಮಂದಿರ, ಜೆ.ಸಿ.ರೋಡ್, ಬೆಂಗಳೂರು-೫೬೦ ೦೦೨.

ಜೀವನ್ ತಾರಾ ಬಿಲ್ಡಿಂಗ್, ೪ ನೇ ಮಹಡಿ, ಡೈಮಂಡ್ ಹಾರ್ಬರ್ ರೋಡ್ ಕಲ್ಕತ್ತಾ-೭೧೦೦೫೩

೧೭೨, ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯ ಮಾರ್ಗ, ದಾದರ್' ಮುಂಬಯಿ-೪೦೦ ೦೧೪

'ಗುಣ ಬಿಲ್ಡಿಂಗ್ಸ್ ' ಎರಡನೆಯ ಮಹಡಿ ೩೦೪-೩೦೫, ಅಣ್ಣಾಸಾಲೈ ಮದ್ರಾಸ್ ೬೦೦ ೦೧೮

**ಬೆಲೆ: ಹದಿನೈದು ರೂಪಾಯಿ**

**ಮುದ್ರಕರು : ಸಂಕಲ್ಪ ಆಫ್‌ಸೆಟ್ ಪ್ರೆಸ್.. ೧೨೬, ತೆಂಗಿನಮರದ ರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩. ಫೋನ್ : ೩೬೧೭೩೯.**

# ಅನುಕ್ರಮಣಿಕೆ


| | |
|---|---|
| ೧. ಜೀವನ ಮತ್ತು ಸ್ವಭಾವ | ೧ |
| ೨. ಆರ್ಯ ಸಮಾಜದ ನೆಲೆಯಲ್ಲಿ | ೪ |
| ೩. ಕ್ರಾಂತಿಕಾರಿಗಳ ದಳದಲ್ಲಿ | ೭ |
| ೪. ವಿಪ್ಲವದ ದಿನಗಳು | ೧೦ |
| ೫. ಮಾರ್ಕ್ಸ್‌ವಾದದಲ್ಲಿ ನಿಷ್ಠೆ | ೧೩ |
| ೬. ಕತೆಗಾರ ಯಶಪಾಲ್ | ೧೮ |
| ೭. ಕಾದಂಬರಿಕಾರ ಯಶಪಾಲ್ | ೩೩ |
| ೮. ಪ್ರವಾಸ ಸಾಹಿತ್ಯ | ೫೦ |
| ೯. ಮಾತಿಗೊಂದು ಮಾತು | ೬೯ |
| ೧೦. ವಾಸ್ತವವಾದದ ಒರೆಗಲ್ಲ ಪರೀಕ್ಷೆ | ೭೫ |
| ೧೧. ಯಶಪಾಲರ ಕೃತಿಗಳು | ೮೭ |

# ಜೀವನ ಮತ್ತು ಸ್ವಭಾವ

ಕ್ರಾಂತಿಕಾರಿ ಯಶಪಾಲ್ ಅವರ ಬಾಳು ಏಳು-ಬೀಳುಗಳ ನಡುವಿನ ದ್ವಂದ್ವದ ರೋಮಾಂಚಕಾರಿ ಕಥೆಯಾಗಿ ಹೋಗಿದೆ. ಇವರು ಹುಟ್ಟಿದ್ದು ಡಿಸೆಂಬರ್ ೩, ೧೯೦೩ರಲ್ಲಿ. ಫಿರೋಜ್‌ಪುರ್ ಕಂಟೋನ್ಮೆಂಟಿನಲ್ಲಿ. ತಂದೆಯವರು ಹೀರಾಲಾಲ್, ಅವರಿಗಿದ್ದ ಆಸ್ತಿ ಸ್ವಂತದ್ದಾದ ಒಂದು ಸಣ್ಣ ಅಂಗಡಿ. ತಾಯಿ ಪ್ರೇಮದೇವಿ, ಕಂಟೋನ್ಮೆಂಟಿನ ಆರ್ಯ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದರು.ಬರುತ್ತಿದ್ದ ಸಂಬಳ ಬಹಳ ಕಡಿಮೆ. ಮನೆಯ ಖರ್ಚಿಗೂ ಸಾಲುತ್ತಿರಲಿಲ್ಲ. ಹೀಗಾಗಿ ಆರಂಭದಲ್ಲಿ ಬಾಲಕ ಯಶಪಾಲ್ ಅವರನ್ನು ನೈನಿತಾಲ್ ಜಿಲ್ಲೆಯ ಕಾಶೀಪುರದಲ್ಲಿ ನೆಂಟರೊಬ್ಬರ ಮನೆಯಲ್ಲಿ ಬಿಟ್ಟರು. ಅವರು ಅಂದುಕೊಂಡದ್ದು, ಅಲ್ಲಿದ್ದರೆ ಓದು ಸಾಂಗವಾಗುವುದೆಂದು. ಆದರೆ ಅದು ಹಾಗಾಗಲಿಲ್ಲ. ಈ ಕಾರಣ ಮಗನನ್ನು ತನ್ನಲ್ಲಿಗೆ ಕರೆಸಿಕೊಂಡಳು ತಾಯಿ. ಕಾಂಗಡಿಯ ಗುರುಕುಲಕ್ಕೆ ಸೇರಿಸಿದಳು. ಆಗ ಯಶಪಾಲರ ವಯಸ್ಸು ಏಳು ವರ್ಷ. ಮಗನು ಮಹರ್ಷಿ ದಯಾನಂದರ ಆದರ್ಶಗಳನ್ನು ಮೈಗೂಡಿಸಿಕೊಳ್ಳಲಿ ಎಂದು ತಾಯಿಯ ಹಂಬಲ. ಆದರೆ ಕ್ರಿ.ಶ. ೧೯೧೭ರ ಹೊತ್ತಿಗೆ ಯಶಪಾಲ್ ಅವರು ಬಹು ಭೀಕರವಾದ ರೀತಿಯಲ್ಲಿ ಖಾಯಿಲೆ ಬಿದ್ದರು. ಈ ಕಾರಣ ಅವರನ್ನು ಲಾಹೋರಿಗೆ ಕಳುಹಿಸಲಾಯಿತು. ಆದರೆ ಸಂಸಾರದ ಸಮಸ್ಯೆಗಳ ಕಾರಣ ಅವರಿಗೆ ಬಹುಕಾಲ ಲಾಹೋರಿನಲ್ಲಿ ಉಳಿಯುವುದಾಗಲಿಲ್ಲ. ಹೀಗಾಗಿ ಅವರ ಮುಂದಿನ ಓದೆಲ್ಲ ನಡೆದದ್ದು ಫೀರೋಜ್‌ಪುರ ಕಂಟೋನ್ಮೆಂಟಿನಲ್ಲೇ. ೧೯೨೧ರಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ಸರ್ವಪ್ರಥಮ ಸ್ಥಾನ ಗಳಿಸಿಕೊಂಡರು. ಈ ವೇಳೆಗಾಗಲೇ ಅವರಿಗೆ ರಾಜಕೀಯದಲ್ಲಿ ಆಸಕ್ತಿ ಬೆಳೆದಿತ್ತು. ರೌಲೆಟ್ ಕಾನೂನನ್ನು ವಿರೋಧಿಸಿ ಕಾಂಗ್ರೆಸ್ಸಿಗರು ನಡೆಸಿದ ಅಸಹಕಾರ ಆಂದೋಳನದ ಪ್ರಭಾವ ಇವರ ಮೇಲೆ ಬಿತ್ತು. ಯಶಪಾಲ್ ಅವರು ಸರ್ವಪ್ರಥಮ ಸ್ಥಾನ ಗಳಿಸಿದ ವಿದ್ಯಾರ್ಥಿಯಾದ ಕಾರಣ ಸರ್ಕಾರಿ ಕಾಲೇಜಿನಲ್ಲಿ ಇವರಿಗೆ ಸ್ಥಾನ ದೊರೆಯಿತು. ಇದರ ಜೊತೆಗೆ ಸ್ಕಾಲರ್‌ಷಿಪ್ ಕೂಡ. ಆದರೆ ಈ ಆಂದೋಳನವು ಈ ಕಾಲೇಜಿನ ಪ್ರವೇಶ ಹಾಗೂ ಸ್ಕಾಲರ್‌ಷಿಪ್ ಅನ್ನು ತಿರಸ್ಕರಿಸುವಷ್ಟು ಪ್ರಭಾವವನ್ನು ಯಶಪಾಲರ ಮೇಲೆ ಬೀರಿತ್ತು. ಯಶಪಾಲ್ ಅವರು ಸ್ವಭಾವತಃ ಹುರುಪಿನವರು. ಆದುದರಿಂದ ಒಡಂಬಡಿಕೆಯ ಶಾಂತ ಕ್ರಮಗಳು ಇವರಿಗೆ ಪಥ್ಯವಾಗುತ್ತಿರಲಿಲ್ಲ. ಹೀಗಾಗಿಯೇ 'ಚೌರೀಚೌರಾ' ಘಟನೆಯ ವಿಷಯದಲ್ಲಿ ಗಾಂಧೀಜಿಯ ದೃಷ್ಟಿಕೋಣ ಇವರಿಗೆ ಹಿಡಿಸಲಿಲ್ಲ. ಯಶಪಾಲ್ ಅವರಿಗೆ ಇದರಿಂದ ನಿರಾಶೆಯಾಗಿ ಮತ್ತೆ ಓದಿನ ಕಡೆ ಗಮನ ಹರಿಸುವಂತೆ ಮಾಡಿತು. ಲಾಲಾ ಲಾಜಪತರಾಯ್ ಅವರು

ಸ್ಥಾಪಿಸಿದ್ದ ನ್ಯಾಷನಲ್ ಕಾಲೇಜಿಗೆ ಸೇರಿಕೊಂಡರು. ಇಲ್ಲೇ ಅವರಿಗೆ ಭಗತ್‌ಸಿಂಗ್, ಸುಖದೇವ್ ಹಾಗೂ ಭಗವತೀಚರಣ್ ವರ್ಮಾ ಅವರ ಒಡನಾಟ ಉಂಟಾದದ್ದು. ಇವರ ಸಾಂಗತ್ಯ ಯಶಪಾಲ್ ಅವರ ಸ್ವಭಾವಕ್ಕೆ ಇಂಬುಗೊಟ್ಟಿತು. ಇದು ಅವರ ಜೀವನಪರ್ಯಂತ ಅವರನ್ನು ಬಿಡಲಿಲ್ಲ.

ಯಶಪಾಲ್ ಅವರು ಬಿ.ಎ. ಪಾಸು ಮಾಡಿದರು. ಕೆಲವು ಕಾಲ ಉಪಾಧ್ಯಾಯ ವೃತ್ತಿಯನ್ನು ಕೈಗೊಂಡರು. ಅದನ್ನು ಬಿಟ್ಟರು. ಪತ್ರಿಕೆಯೊಂದರಲ್ಲಿ ಕೆಲಸಕ್ಕೆ ಸೇರಿಕೊಂಡರು. ಅಲ್ಲಿ ಇರುವುದೂ ಅವರಿಗೆ ಸಾಧ್ಯವಾಗಲಿಲ್ಲ. ಅವರ ಎದೆಯಲ್ಲಿ ಅಗ್ನಿ ಪ್ರಜ್ವಲಿಸಿತ್ತು. ಅದು ನೌಕರಿಯ ಇತಿ ಮಿತಿಗಳಿಂದ ಅವರನ್ನು ಹೊರಗೆಳೆಯುತ್ತಿತ್ತು. ಅವರು ಸ್ವಾತಂತ್ರ್ಯವನ್ನು ಗಳಿಸಿಕೊಡುವ ಭಾರತೀಯರಾಗಿದ್ದರು.

ಯಶಪಾಲ್ ಅವರು ಬೆಟ್ಟದ ಜೀವ. ಕಂಟೋನ್ಮೆಂಟ್‌ನ ಆರ್ಯ ಸಮಾಜದ ವಾತಾವರಣದಲ್ಲಿ ಬೆಳೆದರು. ಬಡತನದ ಕಣ್ಣಿಂದ ಪ್ರಪಂಚವನ್ನು ಕಂಡರು. ಹೀಗೆ ತಮ್ಮ ಸ್ವಪ್ರಯತ್ನದಿಂದ ಬಾಳನ್ನು ರೂಪಿಸಿಕೊಂಡರು. ರಹಸ್ಯ ಮೂಲಕವಾದ ಆಧ್ಯಾತ್ಮಿಕವಾದ ಹಾಗೂ ಅದೃಶ್ಯವಾದ ಜಗತ್ತಿನ ವಿಚಾರಗಳು ಅವರ ಮನಸ್ಸನ್ನು ಎಂದೂ ಹೊಗಲಿಲ್ಲ. ಅವರು ಕ್ರಿಯೆಗೆ ಮತ್ತು ಕರ್ಮಕ್ಕೆ ಅಂಟಿಕೊಂಡರು. ಕಣ್ಣೆದುರು ಪ್ರತ್ಯಕ್ಷವಿದ್ದ ಆಂದೋಳನಗಳ ಪರಿಸರವು ಅವರನ್ನು ಸಕ್ರಿಯರನ್ನಾಗಿಸಿ ಲೆಕ್ಕವಿಲ್ಲದಷ್ಟು ಸಂಭಾವ್ಯಗಳ ಜಗತ್ತನ್ನೇ ಅವರಿಗಾಗಿ ಸೃಷ್ಟಿಸಿತ್ತು. ತಾಯಿಗೆ ಆರ್ಯ ಸಮಾಜದಲ್ಲಿ ನಂಬುಗೆ. ಆಗಿನ ಕಾಲಕ್ಕೆ ಈ ಸಮಾಜದ ಭೂಮಿಕೆಯೂ ಬಹು ಮಟ್ಟಿಗೆ ಬದಲಾವಣೆಯತ್ತ ಧಾವಿಸುವುದಾಗಿತ್ತು. ಗಾಂಧೀಜೀಯ ಪ್ರಭಾವ ಜನಗಳ ಮೇಲೆ ಬೀಳುತ್ತಿದ್ದ ಕಾಲ ಅದು. ಈ ಎರಡರಲ್ಲಿ ಕಂಡು ಬರುತ್ತಿದ್ದ ಪರಿವರ್ತನೆಯ ವಿಚಾರಗಳು ಯಶಪಾಲರಿಗೆ ಬಹುವಾಗಿ ಹಿಡಿಸುತ್ತಿತ್ತು. ಗೆಳೆಯರ ಗುಂಪನ್ನು ಕಟ್ಟಿಕೊಂಡು ಜನಗಳಲ್ಲಿ ಜಾಗೃತಿಯ ಜ್ಯೋತಿ ಬೆಳಗುತ್ತಿದ್ದರು. ಆದರೆ ತಮ್ಮ ಉತ್ಸಾಹಕ್ಕೆ ಅನುಗುಣವಾದ ದಾರಿ ಸಿಕ್ಕದಾದಾಗ, ಆರ್ಯ ಸಮಾಜ ಹಾಗೂ ಗಾಂಧೀಜಿಯ ಕಾಂಗ್ರೆಸ್ ಎರಡನ್ನೂ ಬೇಡವೆಂದು ಬಿಟ್ಟರು. ನ್ಯಾಷನಲ್ ಕಾಲೇಜಿನ ಇವರ ಗೆಳೆಯರು ತರ್ಕ, ಪ್ರೀತಿ, ಪ್ರಾಮಾಣಿಕತೆ, ವೈಚಾರಿಕ ತೀಕ್ಷ್ಣತೆ, ಕ್ರಿಯಾತ್ಮಕತೆ ಮತ್ತು ಹೋರಾಟದ ಮಾರ್ಗವನ್ನೇ ದೇಶದ ಮುಂದಿಟ್ಟರು. ಯಶಪಾಲರ ಹೃದಯ ಯಾವುದಕ್ಕಾಗಿ ತವಕ ಪಡುತ್ತಿತ್ತೋ ಆ ನೆಲೆ ಅವರಿಗೆ ಲಭಿಸಿತು. ಅವರು ಕ್ರಾಂತಿಕಾರಿಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಬಾಂಬು ತಯಾರಿಸುವುದು, ಸ್ಫೋಟಿಸುವುದು, ಗುಂಡಿಕ್ಕುವುದು, ಭೂಗತರಾಗಿ ಕೆಲಸ ಮಾಡುವುದು, ಓದುವುದು, ಕಲಿಯುವುದು -ಇವೇ ಇವರ ದಿನಚರಿಯಾಯಿತು. ಜೇಲಾಯಿತು. ಅಲ್ಲಿ ಬಂಗಾಳಿ, ಫ್ರೆಂಚ್, ರಷ್ಯನ್, ಇಟ್ಯಾಲಿಯನ್ ಭಾಷೆಗಳನ್ನು ಕಲಿತು

ಹೊರಬಂದರು. ಬರೈಲಿ ಜೈಲಿನಲ್ಲಿದ್ದಾಗ ಆಗಸ್ಟ್ ೭, ೧೯೩೬ ರಲ್ಲಿ ಪ್ರಕಾಶವತಿ ಅವರನ್ನು ಬಾಳಸಂಗಾತಿಯಾಗಿ ಆರಿಸಿಕೊಂಡರು. ಈಕೆ ಯಶಪಾಲರಿಗೆ ಪೂರಕಳೆನಿಸಿದಳು. ಕೆಲಕಾಲದ ನಂತರ ಕ್ರಾಂತಿಕಾರಕ ಬಳಗದಲ್ಲಿ ತಾವೊಬ್ಬರೇ ಉಳಿದುಕೊಂಡಾಗ, ಬಂದೂಕನ್ನು ಬಿಟ್ಟುಕೊಟ್ಟು ಲೇಖಣಿಯನ್ನು ಹಿಡಿದರು. ಡಿಸೆಂಬರ್ ೨೬, ೧೯೭೬ ರವರೆಗೂ ಈ ದಾರಿಯಲ್ಲಿ ಅವಿಶ್ರಾಂತವಾಗಿ ನಡೆದರು. ಈ ತಾರೀಖೇ ಅವರ ಜೀವನದ ಕಡೆಯ ದಿನವೂ ಆಯಿತು.

## ಆರ್ಯಸಮಾಜದ ನೆಲೆಯಲ್ಲಿ

ಯಶಪಾಲ್ ಅವರ ಮನಸ್ಸಿನಲ್ಲಿ ವೈಚಾರಿಕ ಪ್ರಭಾವ ಮತ್ತು ಅದರೊಡನೆ ಕದನ ಏರ್ಪಟ್ಟದ್ದು ಆರ್ಯಸಮಾಜದ ನೆಲೆಯಲ್ಲೇ. ಅವರಿಗೆ ಆರ್ಯ ಸಮಾಜದ ದೀಕ್ಷೆ ದೊರೆತದ್ದು ಒಬ್ಬ ವಿದ್ಯಾರ್ಥಿಗೆ ದೊರೆಯುವ್ಯೋಪಾದಿಯಲ್ಲಿ. ತಾಯಿ ಬಯಸಿದ್ದೂ ಇದನ್ನೇ. ಆಕೆ ಈ ಬಾಲಕನು ಧರ್ಮಪ್ರಚಾರಕನಾಗಿ ಸಜ್ಜುಗೊಳ್ಳಲಿ ಎಂದು ಬಯಸಿದ್ದಳು. ಗುರುಕುಲ ಕಾಂಗಡಿಯಲ್ಲಿನ ಜೀವನ "ಬರಿಗಾಲಿನಲ್ಲಿ ನಡೆ, ಇಲ್ಲವಾದರೆ ಪಾದುಕೆಗಳನ್ನು ಧರಿಸು, ಹಲಗೆಯ ಮೇಲೆ ಮಲಗು, ಮೈಕೊರೆವ ಚಳಿಯಲ್ಲಿ ಸೂರ್ಯೋದಯಕ್ಕೆ ಮುನ್ನವೇ ತಣ್ಣೀರಿನಲ್ಲಿ ಸ್ನಾನ ಮಾಡು. ಊಟವಾದ ಮೇಲೆ ತಾಟು ಬಟ್ಟಲುಗಳನ್ನು ನೀನೇ ತೊಳೆದಿಟ್ಟುಕೋ, ಎಂದೆಂದೂ ಅಂಗಡಿಯತ್ತ ಹೋಗದಿರು, ಹೆಣ್ಣನ್ನು ಕಣ್ಣೆತ್ತಿ ನೋಡದಿರು" -ಹೀಗೆಲ್ಲ ಸಂಯಮ ಪೂರ್ಣವಾದ ನಿಯಮಾವಳಿಗಳನ್ನು ಬಾಲಕ ಯಶಪಾಲ ಪಾಲಿಸಬೇಕಿತ್ತು (ಸಿಂಹಾವಲೋಕನ, ಭಾಗ ೧-ಪುಟ ೪೪).

ಆರ್ಯ ಪಾಠಶಾಲೆಯು ಸಂಯಮದ ಬಾಳನ್ನು ಕಲಿಸುವುದರ ಜೊತೆಗೆ ವಿದೇಶಿ ಆಡಳಿತದಿಂದ ಬಿಡುಗಡೆ ಹೊಂದದೆ ರಾಷ್ಟ್ರದ ಪುರೋಭಿವೃದ್ಧಿ ಸಾಧ್ಯವಿಲ್ಲ ಎಂಬ ಗುರಿಯನ್ನು ವಿದ್ಯಾರ್ಥಿಗಳ ಮುಂದಿಡುತ್ತಿತ್ತು. ಪರದಾಸ್ಯ ಹಾಗೂ ದೇಶಪ್ರೇಮದ ಅರ್ಥ ಯಶಪಾಲರು ಕಂಡುಕೊಂಡದ್ದು ಇಲ್ಲೇ. "ಸಂಜೆಯ ಹೊತ್ತು ಸ್ಕೂಲಿನ ಆಟದ ಬಯಲಿನಲ್ಲಿ ಸಾಧಾರಣವಾಗಿ ಇಂಗ್ಲಿಷರನ್ನು ವಿರೋಧಿಸಿ ಮಾತನಾಡುತ್ತಿದ್ದೆನಾದ ಕಾರಣ, ಇಂಗ್ಲೆಂಡ್ ಸ್ವಲ್ಪ ಮಟ್ಟಿಗೆ ಗುರುಕುಲದಂತಹ ವಾತಾವರಣವನ್ನು ಹೊಂದಿದೆ ಎಂಬುದನ್ನು ಕಣ್ಣುಮುಚ್ಚಿಕೊಂಡು ಕಲ್ಪನೆಯೊಳಗೆ ಕಾಣುತ್ತಿದ್ದೆ. ಬ್ರಿಟಿಷರು ಪಂಚೆ ಕುರ್ತಾ ಧರಿಸಬೇಕಾಗುತ್ತದೆ ಎಂದು ಕಲ್ಪಿಸಿಕೊಳ್ಳುತ್ತಿದ್ದೆ" (ಅದೇ, ಪುಟ ೪೫).

ಬ್ರಿಟಿಷರು ಭಾರತೀಯರನ್ನು ಕೀಳಾಗಿ ಕಾಣುತ್ತಿದ್ದು; ತಮ್ಮ ಜನಾಂಗದ ಹಿರಿತನದ ಬಗ್ಗೆ ಅಹಂಕಾರವನ್ನು ತೋರಿಸಿಕೊಳ್ಳುತ್ತಿದ್ದುದ್ದನ್ನು ಯಶಪಾಲ್ ಅವರು ಕಣ್ಣಾರೆ ಕಂಡಿದ್ದರು. ಹೀಗಾಗಿ ಪಾಠಶಾಲೆಯಲ್ಲಿ ಈ ಸಂಬಂಧವಾಗಿ ನಡೆಯುತ್ತಿದ್ದ ಚರ್ಚೆಗಳು ಅವರಿಗೆ ಬಹಳಷ್ಟು ಹಿಡಿಸುತ್ತಿದ್ದವು. ಅವರು ಓದಿದ್ದಕ್ಕಿಂತ ಹೆಚ್ಚಾಗಿ ಅರ್ಥ ಮಾಡಿಕೊಳ್ಳುತ್ತಿದ್ದರು. ಭಾರತದ ಶ್ರೀಮಂತರು ಬಡಜನರನ್ನು ಕಂಡರೆ ಹೇಗೆ ನಡೆದುಕೊಳ್ಳುತ್ತಾರೆ ಎಂಬ ಬಗೆಯನ್ನೂ ಬಹುಬೇಗ ಗ್ರಹಿಸಿಕೊಳ್ಳುತ್ತಿದ್ದರು.

ಆರ್ಯ ಪಾಠಶಾಲೆಯಲ್ಲಿ ಸಮಾನತೆಯ ಪಾಠವನ್ನೇನೋ ಕಲಿಸುತ್ತಿದ್ದರು. ಆದರೆ ಹಣವಂತರ ಮಕ್ಕಳು ಮಾತ್ರ ಸದಾ ಸುಖಿಗಳಾಗಿರುತ್ತಿದ್ದರು. ಅವರು

ಗುರುಗಳ ಕೃಪೆಗೆ ಪಾತ್ರರಾಗುತ್ತಿದ್ದರು. ಹಾಗೂ ಯಶಪಾಲರಂತ ಬಡ ಹುಡುಗರ ಬಗ್ಗೆ ಕೊಂಕು ನುಡಿಯುತ್ತಿದ್ದರು. ಹೀಗೆ ಈ ಸಮಷ್ಟಿಯು ಒಳಗೆ ಇವರಿಗೆ ಒಂದೆಡೆ ದೇಶಪ್ರೇಮದ ಉಣಿಸು ಸಿಗುತ್ತಿತ್ತು. ಇನ್ನೊಂದೆಡೆ ವರ್ಗ-ವೈಷಮ್ಯವನ್ನು ಇವರು ಗುರ್ತಿಸಿಕೊಂಡರು. ಸಾಮ್ರಾಜ್ಯವಾದ ಮತ್ತು ಸಾಮಂತವಾದಗಳ ಬಗ್ಗೆ ದ್ವೇಷ ಭಾವನೆಯು ಅಂಕುರಾರ್ಪಣವಾದದ್ದೂ ಇಲ್ಲೇ. ಸಾಮಂತವಾದದ ವಿರುದ್ಧವಾದ ಸಂಸ್ಕಾರಗಳು ಆರ್ಯ ಸಮಾಜದ ಶಿಕ್ಷಣದಿಂದ ಸಿಗುವುದಕ್ಕೆ ಬದಲಾಗಿ ಸ್ವಾನುಭವವೇ ಇವರಲ್ಲಿ ಆ ಮೊಳಕೆಯನ್ನು ಬೆಳೆಸಿತು. ಸ್ವಂತವಾದ ಅನುಭವಗಳು ಇವರನ್ನು ಆರ್ಯಸಮಾಜದ ವರ್ತುಳದಿಂದ ಹೊರಗೆಳೆದವು. ಇವರು ಆರ್ಯಸಮಾಜದ ಗುಣದೋಷಗಳನ್ನು ಅರಿತುಕೊಂಡರು.

"ಕಾಂಗಡಾದಿಂದ ಪಂಜಾಬಿಗೆ ಬಂದು ನೆಲೆಸಿದ ನಮ್ಮ ಹಲವರು ಬಂಧುಗಳು ಆರ್ಯ ಸಮಾಜದ ಪ್ರಭಾವಕ್ಕೆ ಒಳಗಾಗದೆ ಇದ್ದಿದ್ದರೆ, ಮತ್ತು ಅವರ ಕೃಪೆಯಿಂದಾಗಿ ನಮ್ಮ ತಾಯಿಗೆ ಅಕ್ಷರಜ್ಞಾನ ಲಭಿಸದೇ ಹೋಗಿದ್ದರೆ ಬಹುಶಃ ನಾನೂ ಕೂಡ ಕಾಂಗಡಾದ ಉಳಿದ ಬಡ ಖತ್ರಿ ನವ ಯುವಕರ ಹಾಗೆ ಬೆನ್ನಿನ ಮೇಲೆ ಏನಾದರೂ ಸಾಮಾನು ಹೇರಿಕೊಂಡು ಅಂಗಡಿ ಮುಂಗಟ್ಟಿನ ವ್ಯವಹಾರದಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದೆ. ಇಲ್ಲವಾದರೆ ಲಾಹೋರ್ ಅಥವಾ ಅಮೃತಸರದಲ್ಲಿ ಮುಸರೆ ತಿಕ್ಕುವ ಕೆಲಸ ಮಾಡಿಕೊಂಡಿರುತ್ತಿದ್ದೆ" ಎಂಬುದು ಅವರಿಗೆ ನೆನಪು (ಅದೇ, ಪುಟ ೬೪).

ಯಶಪಾಲ್ ಅವರು ಆರ್ಯ ಸಮಾಜದ ಕೊಡುಗೆಯನ್ನು ಎಂದೂ ಮರೆಯಲಿಲ್ಲ. ಆದರೆ ಅಲ್ಲಿನ ಆಧ್ಯಾತ್ಮಿಕ ದೃಷ್ಟಿಕೋಣ ಮತ್ತು ಸಂಯಮದ ಜೀವನವೆಂದು ಹೇಳಲಾಗುವ ಅಲ್ಲಿನ ದೈನಂದಿನ ಚಟುವಟಿಕೆಗಳು ಮನಸ್ಸಿನಲ್ಲಿ ಬೆಳೆಸುವ ಗ್ರಂಥಿಗಳನ್ನು ಅವರು ಗುರ್ತಿಸಿಕೊಂಡರು. ಅವುಗಳ ನಡುವಿನ ಅಂತರ್ವಿರೋಧವನ್ನು ಕಂಡುಕೊಳ್ಳುವ ಸಾಮರ್ಥ್ಯ ಅವರಿಗೆ ಬಂದಿತ್ತು. ಆದುದರಿಂದಲೇ ಪ್ರಕೃತಿಜನ್ಯವಾದ ಇಚ್ಛೆಗಳನ್ನು ಹತ್ತಿಕ್ಕುವ ಪ್ರಯತ್ನಗಳ ವಿರುದ್ಧ ಸಿಡಿದೆದ್ದರು. ಯಶಪಾಲ್ ಅವರು ತಮ್ಮ ಐವತ್ತಕ್ಕೂ ಹೆಚ್ಚಿನ ಕಥೆಗಳಲ್ಲಿ ಈ ಪ್ರತಿಕ್ರಿಯೆಗೆ ಯಾವ ಮುಚ್ಚುಮರೆ ಇಲ್ಲದ ಅಭಿವ್ಯಕ್ತಿ ನೀಡಿದ್ದಾರೆ. ಉದಾಹರಣೆಗೆ ಅವರ ಒಂದು ಕಥೆ "ಪ್ರಾಯಶ್ಚಿತ್ತ". ಇದರಲ್ಲಿ ತಂದೆಯೊಬ್ಬ ತನ್ನ ಮಗಳನ್ನು ಪ್ರಾರಂಭದಿಂದಲೇ ಆರ್ಯ ಸಮಾಜದ ಶಿಕ್ಷಣಕ್ಕೆ ಬಂಧಿಸಿ ಬಿಡುತ್ತಾನೆ. ಅವಳು ಸಂಧ್ಯಾವಂದನೆ, ತಪಸ್ಸು ಮತ್ತು ಯಮ-ನಿಯಮಗಳನ್ನು ಬಹು ಚೆನ್ನಾಗಿ ರೂಢಿಸಿಕೊಳ್ಳುತ್ತಾಳೆ. ಆದರೆ ಅವಕಾಶ ಬಂದೊದಗಿದಾಗ ಹದಿನಾಲ್ಕನೆಯ ವಯಸ್ಸಿಗೆ ಕಾಮಕ್ಕೆ ಬಲಿಯಾಗುತ್ತಾಳೆ. ಅವಳೇ ಸ್ವತಃ ಅನ್ನುತ್ತಾಳೆ:

"ಗುರುಕುಲದ ಆಶ್ರಮದಲ್ಲಿ ಇದ್ದಾಗಲೇ ನನ್ನ ಮನಸ್ಸಿನಲ್ಲಿ ಭೋಗಾಪೇಕ್ಷೆಯ ಭಾವನೆ ಉಕ್ಕೇರಿತ್ತು. ಆದರೆ ಅಧಿಷ್ಠಾತ್ರಿಗಳ ಮುಖದಿಂದ

ಉಪದೇಶಗಳನ್ನು ಕೇಳಿ ಆ ಭಾವನೆಯನ್ನು ಹತ್ತಿಕ್ಕುತ್ತಿದ್ದೆ" (ಪಿಂಜರೇ ಕೀ ಉಡಾನ್, ಪುಟ ೧೦೨).

'ಜ್ಞಾನ್‌ದಾನ್', 'ಧರ್ಮರಕ್ಷಾ', 'ಉತ್ತಮೀ ಕೀ ಮಾಂ', 'ಪಾಪ್ ಕೀಕೀಚಡ್' ಮತ್ತು 'ಹಿಂಸಾ' ಮೊದಲಾದ ಕಥೆಗಳಲ್ಲಿ ಇದೇ ಎಲ್ಲ ವಿಚಾರಗಳು ಬರುತ್ತವೆ.

# ಕ್ರಾಂತಿಕಾರಿಗಳ ದಳದಲ್ಲಿ

ಆರ್ಯ ಸಮಾಜದ ಪಾಠಶಾಲೆಯಲ್ಲಿ ಯಶಪಾಲರಿಗೆ ದೇಶಪ್ರೇಮವೆಂದರೆ ಏನು ಎಂದು ಅರಿವಾಗುತ್ತಿತ್ತು. ಗಾಂಧೀಜಿಯ ಅಸಹಕಾರ ಆಂದೋಲನದಲ್ಲಿ ಕೆಲವು ದಿನ ಭಾಗವಹಿಸಿ ಒಂದು ದೊಡ್ಡ ಸಾಮ್ರಾಜ್ಯದ ವಿರುದ್ಧ ಸಕ್ರಿಯವಾಗಿ ಹೋರಾಡುವ ಹಂತವನ್ನು ಮುಟ್ಟಿದ್ದರು. ಆದರೆ ಈ ಎರಡೂ ನೆಲೆಗಳು ಅವರ ಸ್ವಭಾವವನ್ನು ವಿಕಾಸಗೊಳಿಸುವುದರಲ್ಲಿ ಅಪೂರ್ಣವೆನಿಸಿದವು. ಅವರ ವ್ಯಕ್ತಿತ್ವ ಅದ್ಭುತವಾದ ಸ್ಫೋಟಕ ಶಕ್ತಿಯ ದಾಸ್ತಾನಾಗಿತ್ತು. ಏನಾದರೂ ಮಾಡಿ ತೋರಿಸಬೇಕೆಂಬ ಹವಣಿಕೆ ಅವರಲ್ಲಿ ಚಡಪಡಿಸುತ್ತಿತ್ತು. 'ಚೌರೀ ಚೌರಾ' ಕಾಂಡದ ನಂತರ ಗಾಂಧೀಜಿ ಅಸಹಕಾರ ಆಂದೋಲನವನ್ನು ನಿಲ್ಲಿಸಿದಾಗ ಯಶಪಾಲರಿಗೆ ಭಾರೀ ಆಘಾತವಾದಂತಾಯಿತು. ಆಗಿನ ದಿನಗಳಲ್ಲಿ ರಷ್ಯಾ ದೇಶದಲ್ಲಿ ವ್ಯಾಪಿಸಿದ್ದ ಕ್ರಾಂತಿಯ ಪ್ರಭಾವವು ತಮ್ಮ ಮುಂದಾಳುತನವನ್ನು ಕಸಿಯುವ ಮಟ್ಟದಲ್ಲಿ ಈ ದೇಶದಲ್ಲಿ ವ್ಯಾಪಿಸಿ ಬಿಟ್ಟೀತೆಂಬ ಶಂಕೆ ಗಾಂಧೀಜಿಗಾಗಿತ್ತು. ಅಸಹಕಾರ ಆಂದೋಲನದ ಪರಿಣಾಮವಾಗಿ ಕಾವೇರಿದ ಉತ್ಸಾಹ ಹಾಗೂ ಕಾರ್ಮಿಕರಲ್ಲಿ ಎಚ್ಚರಗೊಂಡಿದ್ದ ರಾಷ್ಟ್ರೀಯ ಭಾವನೆಗಳನ್ನು ಬಳಸಿಕೊಳ್ಳುವ ಸಾಮರ್ಥ್ಯ ಗಾಂಧೀಜಿಗಿರಲಿಲ್ಲವಾಗಿ ಅದನ್ನು ತಣ್ಣಗಾಗಿಸುವ ನೀತಿಯನ್ನು ಅವರು ಅನುಸರಿಸಿದರು. ತಮ್ಮ ಈ ಮನೋಗತವನ್ನು ಬಹುದಿನ ಬಚ್ಚಿಡುವುದು ಅವರಿಗೆ ಸಾಧ್ಯವಾಗಲಿಲ್ಲ. ನವಂಬರ್ ೨೪, ೧೯೨೧ರ 'ಯಂಗ್ ಇಂಡಿಯಾ'ದಲ್ಲಿ ಅವರು ಸ್ಪಷ್ಟವಾಗಿ ಬರೆದರು. "ಇದು ಸ್ವರಾಜ್ಯದ ಹಾದಿಯಲ್ಲ. ಹಿಂದೂಸ್ತಾನಕ್ಕೆ ಬೋಲ್ಶೇವಿಜಮ್ ಬೇಕಿಲ್ಲ. ಇಲ್ಲಿ ಜನಗಳು ಅರಾಜಕತೆಯನ್ನು ಸಹಿಸಿಕೊಳ್ಳಲಾರದ ಶಾಂತಿಪ್ರಿಯರು." ಈ ಮಾತುಗಳು ಯುವಕ ಸಮೂಹಕ್ಕೆ ರುಚಿಸಲಿಲ್ಲ. ಆದುದರಿಂದ ಅವರು ಗಾಂಧೀಜಿಯನ್ನು ತೊರೆದರು. ಇದುವರೆಗಾಗಲೇ ಕೆಲ ಯುವಕರು ಹಿಂದೂಸ್ತಾನಿ ಪ್ರಜಾತಂತ್ರದಳ (ಎಚ್.ಆರ್.ಎ.) ಎಂಬ ಹೆಸರಿನಲ್ಲಿ ಗುಪ್ತವಾಗಿ ಕ್ರಾಂತಿಕಾರಕ ಚಟುವಟಿಕೆಗಳನ್ನು ಶುರು ಮಾಡಿದ್ದರು. ಈಗಂತೂ ಭ್ರಮನಿರಸನ ಉಂಟಾದಾಗ ಸರದಾರ್ ಭಗತ್‌ಸಿಂಗ್, ಸುಖದೇವ್ ಮತ್ತು ಭಗವತೀಚರಣ್ ವರ್ಮಾ ಮೊದಲಾದವರ ಹಿರಿತನದಲ್ಲಿ 'ನವ್ ಜವಾನ್ ಭಾರತೀಯ ಸಭಾ' ಎಂಬ ಹೆಸರಿನಲ್ಲಿ ಒಂದು ಸಂಘಟನೆ ತಲೆ ಎತ್ತಿತು. ಕ್ರಾಂತಿಕಾರಿ ಭಾವನೆಗಳಿಗೆ ಚಾಲನೆ ನೀಡುವುದೇ ಈ ಸಂಘಟನೆಯ ಉದ್ದೇಶವಾಗಿತ್ತು. ಕ್ರಮಕ್ರಮವಾಗಿ ನೂರಾರು ಯುವಕರು ಈ ಸಂಘಟನೆಯಲ್ಲಿ ಸೇರಿಕೊಂಡರು. ಭಗತ್‌ಸಿಂಹ ಮತ್ತು ಸುಖದೇವ್ ಅವರು ವ್ಯಾಸಂಗಕ್ಕೆ ವಿದಾಯ ಹೇಳಿದರು. ಸರ್ಕಾರ ಇವರ ಮೇಲೆ ಮುಗಿಬಿದ್ದಾಗ

ಇವರಿಬ್ಬರೂ ಅಲ್ಲಿಂದ ತಳಕಿತ್ತರು. ಯಶಪಾಲ್ ಇದುವರೆಗಾಗಲೇ ಇವರನ್ನು ಕೂಡಿಕೊಂಡಿದ್ದರು. ಆದುದರಿಂದ ಉಪಾಧ್ಯಾಯ ವೃತ್ತಿಯಲ್ಲಿದ್ದರೂ ಅವರು ಕೈಗೊಂಡಿದ್ದ ಕೆಲಸವನ್ನು ಇವರು ಕೈಗೆತ್ತಿಕೊಂಡರು. ಕ್ರಾಂತಿ ಮಾಡುವುದು, ಅದರೊಟ್ಟಿಗೆ ನೌಕರಿ ಮಾಡುವುದು ಇವೆರಡನ್ನೂ ಸಾಧಿಸುವುದು ಅಸಂಭವವಾದ ಕಾರಣ ಕೆಲಸ ಬಿಟ್ಟರು. ಘಟನೆಗಳು ತೀವ್ರತೆಯನ್ನು ಪಡೆದವು. ಈ ನಡುವೆ ಯಶಪಾಲ್ ಕ್ರಾಂತಿಕಾರಿ ಚಟುವಟಿಕೆಗಳನ್ನು ಬಲು ಚೆನ್ನಾಗಿ ಮೈಗೂಡಿಸಿಕೊಳ್ಳುತ್ತಿದ್ದರು.

ಡಿಸೆಂಬರ್ ೧೯೨೮ರಲ್ಲಿ ಸೈಮನ್ ಕಮೀಷನ್ ಬಂತು. ಲಾಲಾ ಲಜಪತರಾಯ್ ಇದನ್ನು 'ಬಾಯ್ ಕಾಟ್' ಮಾಡಿ ಎಂದು ಕರೆ ಇತ್ತರು. ಲಕ್ಷಾಂತರ ಜನ ಅವರನ್ನು ಕೂಡಿಕೊಂಡರು. ಪೊಲೀಸರು ಲಾಜಪತರಾಯ್ ಅವರನ್ನು ಥಳಿಸಿದರು. ಅವರು ಹುತಾತ್ಮರಾದರು. ಕ್ರಾಂತಿಕಾರಿ ಯುವಕರು ಇದನ್ನು ಸಹಿಸಿಯಾರೇ ? ಈ ಎಲ್ಲಾ ಅತ್ಯಾಚಾರಕ್ಕೆ ಕಾರಣಕರ್ತನೆನಿಸಿದ ಪೊಲೀಸ್ ಸೂಪರಿಂಟೆಂಡೆಂಟ್ ಸ್ಯಾಂಡರ್ಸ್‌ನನ್ನು ಯುವಕರು ಕೊಂದರು. ೧೯೨೯ರಲ್ಲಿ ಭಗತ್‌ಸಿಂಹ ಅಸೆಂಬ್ಲಿಯಲ್ಲಿ ಬಾಂಬ್ ಎಸೆದರು. ಇದರಿಂದ ಆಡಳಿತ ತಲ್ಲಣಿಸಿತು. ಆಗಿನ ದಿನಗಳಲ್ಲಿ ಯಶಪಾಲ್ ಲಾಹೋರಿನ ಒಂದು ಗುಪ್ತ ಕೇಂದ್ರದಲ್ಲಿ ಬಾಂಬ್ ತಯಾರಿಸುತ್ತಿದ್ದರು. ಗುಪ್ತ ಪೊಲೀಸ್ ದಳಕ್ಕೆ ಇದು ತಿಳಿದು ಹೋಯಿತು. ಅವರು ಈ ನೆಲೆಯನ್ನು ವಶಪಡಿಸಿಕೊಂಡರು. ಆದರೆ ಯಶಪಾಲ್ ತಪ್ಪಿಸಿಕೊಂಡು ತಲೆ ಮರೆಸಿಕೊಂಡರು. ರೋಹತಕ್ ತಲುಪಿ ಅಲ್ಲಿ ಕಿಸ್ನಾ ಎಂಬ ಹೆಸರಿಟ್ಟುಕೊಂಡು ವೈದ್ಯ ಲೇಖರಾಜ್ ಎಂಬುವರಲ್ಲಿ ಕೆಲಸಕ್ಕೆ ಸೇರಿಕೊಂಡರು. ವೈದ್ಯರಾಜರ ಅಂಗಡಿಯ ಕೆಲಸದಿಂದ ಬಿಡುವು ಸಿಕ್ಕಿದಾಗ ಬಾಂಬು ತಯಾರಿಸುತ್ತಿದ್ದರು. ದ್ರಾವಕದ ಹೊಗೆಯಿಂದ ಅವರ ಬಟ್ಟೆಗಳೆಲ್ಲ ತೂತಾದವು. ಚರ್ಮ ಸುಟ್ಟಿತು. ಆದರೂ ಅವರ ಶ್ರದ್ಧೆ ಕುಸಿಯಲಿಲ್ಲ. ಡಿಸೆಂಬರ್ ೧೯೨೯ರಲ್ಲಿ ಇವರ ದಳ ಲಾರ್ಡ್ ಇರ್‌ವಿನ್ ಅವರು ಪ್ರಯಾಣಿಸುತ್ತಿದ್ದ ಗಾಡಿಯನ್ನು ಬಾಂಬಿನಿಂದ ಸಿಡಿಸಬೇಕೆಂದು ನಿರ್ಣಯಿಸಿತು. ಯಶಪಾಲ್ ಇದನ್ನು ನಿರ್ವಹಿಸಿದರು. ಈ ವೇಳೆಗಾಗಲೇ ಅವರು ಸಮಾಜವಾದದ ಸಿದ್ಧಾಂತಗಳನ್ನು ಅರ್ಥ ಮಾಡಿಕೊಂಡಿದ್ದರು. ಆಗ ಒಬ್ಬ ಪ್ರತಿಕ್ರಿಯಾವಾದೀ ಮಹಾಶಯರು ಮಹಮ್ಮದಾಲಿ ಜಿನ್ನಾ ಅವರನ್ನು ಕೊಂದರೆ ಹೇರಳವಾದ ಆರ್ಥಿಕ ನೆರವನ್ನು ಒದಗಿಸುವುದಾಗಿ ಇವರಿಗೆ ತಿಳಿಸಿದರು. ಆಗಂತೂ ಇವರ ದಳಕ್ಕೆ ಹಣದ ಅಗತ್ಯ ಬಹಳವಾಗಿತ್ತು. ಅವರು ಇಂತಹ ಕೆಲಸ ಮಾಡುವುದಿಲ್ಲ ಅಂದದ್ದು ಸೈದ್ಧಾಂತಿಕ ನಿಲುವಿನ ಬಗ್ಗೆ ಅವರಿಗಿದ್ದ ಆಸ್ಥೆಗೆ ಒಂದು ಪುರಾವೆ. ಮಾನವೀಯ ಐಕ್ಯದ ವೈಜ್ಞಾನಿಕ ಸಿದ್ಧಾಂತಗಳು ಯಶಪಾಲರ ಮನಸ್ಸಿನಲ್ಲಿ ಬಹಳ ಆಳವಾಗಿ ಬೇರೂರಿದ್ದವು ಎಂಬ ವಿಚಾರ ಇದರಿಂದ ಸಾಬೀತಾಗುತ್ತದೆ.

ಯಶಪಾಲರ ದಳ ಪ್ರತಿ ಕ್ಷಣ ಮೃತ್ಯುವಿನೊಡನೆ ಸರಸವಾಡುತ್ತಿತ್ತು. ಅದರ ಮುಂದಾಳುಗಳಲ್ಲಿ ಯಾವುದೇ ಕ್ಷಣ ಮೃತ್ಯು ಮುಖವನ್ನು ಯಾರು ಪ್ರವೇಶಿಸುವರು ಎಂದು ಹೇಳಲು ಬರುವಂತಿರಲಿಲ್ಲ. ಫೆಬ್ರವರಿ ೨೭, ೧೯೩೧ ರಂದು ದಳದ ಪ್ರಮುಖ ಮುಂದಾಳಾದ ಚಂದ್ರಶೇಖರ್ ಅಜಾದ್ ಹುತಾತ್ಮರಾದರು. ಆಗ ಮುಂದಾಳುತನವನ್ನು ಹೊರುವ ಹೊಣೆಗಾರಿಕೆ ಯಶಪಾಲರ ಪಾಲಿಗೆ ಬಂತು. ದಳದ ಚಟುವಟಿಕೆ ಹಾಗೂ ಅದರ ಮುಂದಾಳುಗಳ ಮೇಲೆ ದೆಹಲಿ ಮತ್ತು ಲಾಹೋರಿನಲ್ಲಿ ಮೊಕದ್ದಮೆಗಳನ್ನು ಹೂಡಲಾದಾಗ, ಯಶಪಾಲ್ ಅವರನ್ನು ಮುಖ್ಯ ಅಪರಾಧಿ ಎಂದುಘೋಷಿಸಲಾಯಿತು. ಯಶಪಾಲ್ ಸುಲಭವಾಗಿ ಸಿಕ್ಕಿಹಾಕಿಕೊಳ್ಳುವವರಲ್ಲ ಎಂದು ಅರಿತಿದ್ದ ಸರ್ಕಾರ, ಪತ್ರಿಕೆಗಳಲ್ಲಿ ಅವರ ವಿರುದ್ಧ ಪ್ರಕಟಣೆ ನೀಡಿ, ಅವರನ್ನು ಹಿಡಿದು ಕೊಟ್ಟವರಿಗೆ ಬಹುಮಾನ ನೀಡುವುದಾಗಿ ಘೋಷಿಸಿತು. ಜನವರಿ ೨೩, ೧೯೩೨ರಂದು ಪೊಲೀಸ್ ಅವರನ್ನು ಅಲಹಾಬಾದಿನಲ್ಲಿ ಪತ್ತೆ ಹಚ್ಚಿತು. ಎರಡೂ ಕಡೆ ಗುಂಡಿನ ಚಕಮಕಿ ನಡೆಯಿತು. ಕಡೆಗೆ ಯಶಪಾಲ್ ಸಿಕ್ಕಿಬಿದ್ದರು. ಸರ್ಕಾರ ಅವರಿಗೆ ಹದಿನಾಲ್ಕು ವರ್ಷ ಜೈಲುವಾಸ ವಿಧಿಸಿತು. ೧೯೩೭ರಲ್ಲಿ ಕಾಂಗ್ರೆಸ್ ಮಂತ್ರಿಮಂಡಲವನ್ನು ರಚಿಸಿತು. ಉಳಿದವರನ್ನು ಬಿಡುಗಡೆ ಮಾಡಿದರೂ, ಬ್ರಿಟಿಷ್ ಸರ್ಕಾರ ಇವರನ್ನು ಮಾತ್ರ ಭಯಂಕರ ವ್ಯಕ್ತಿ ಎಂದು ನಿರ್ಧರಿಸಿ ಜೈಲಿನಲ್ಲೇ ಮುಂದುವರಿಸಿತು. ಜನತೆ ಮತ್ತು ಮಂತ್ರಿಮಂಡಲ ಒತ್ತಡ ತಂದ ಕಾರಣ ಗವರ್ನರ್ ಅವರು ಇವರನ್ನು ಮಾರ್ಚ್ ೨, ೧೯೩೮ರಂದು ಬಿಡುಗಡೆ ಮಾಡಿದರು. ಆದರೆ ಅವರು ಪಂಜಾಬಿಗೆ ಹೋಗುವ ಹಾಗಿಲ್ಲ ಎಂಬ ನಿರ್ಬಂಧವನ್ನು ಹೊರೆಸಿತು. ಅವರಿಗೆ ಇದರಿಂದ ಯಾವುದೇ ವ್ಯತ್ಯಾಸ ಕಾಣಲಿಲ್ಲ. ಇದ್ದಲ್ಲೇ ಕೆಲಸ ಮಾಡುವುದು ಎಂದುಕೊಂಡರು. ಲಖನೌದಲ್ಲಿರುವುದೆಂದು ನಿಶ್ಚಯಿಸಿಕೊಂಡರು. 'ಕರ್ಮಯೋಗಿ'ಯಲ್ಲಿ ಕೆಲಸ ಒಪ್ಪಿಕೊಂಡರು. ಅವರು ಈ ಕೆಲಸ ಮಾಡಿದ್ದು ಬರೇ ಎರಡು ತಿಂಗಳು. ಬೇರೆಯವರಲ್ಲಿ ಕೆಲಸ ಮಾಡುವುದು ಅವರ ಜಾಯಮಾನಕ್ಕೇ ಬಂದಿರಲಿಲ್ಲ. ಈ ವಿಷಯ ಅವರಿಗೆ ಈಗಾಗಲೇ ಮನವರಿಕೆಯಾಗಿತ್ತು.

## 'ವಿಪ್ಲವ'ದ ದಿನಗಳು

ಬಾಂಬು ಹಾಕಿ ಹಾಗೂ ಗುಂಡು ಹಾರಿಸಿ ಭಯದ ವಾತಾವರಣ ಸೃಷ್ಟಿಸುವ ಹೋರಾಟದ ದಿನಗಳು ಮುಗಿದು ಹೋದವೆಂದು ಯಶಪಾಲರಿಗೆ ಮನವರಿಕೆಯಾಯಿತು. ಅದಕ್ಕೆ ಅಗತ್ಯವೆನಿಸುವ ಹಣಕಾಸನ್ನು ಒದಗಿಸಿಕೊಳ್ಳುವುದಾಗಲಿಅಥವಾ ಸಂಘಟನೆಯನ್ನುಬಲಗೊಳಿಸಿಕೊಳ್ಳುವುದಾಗಲಿ ಸಾಧ್ಯವಿರಲಿಲ್ಲ. ಹೀಗಾಗಿ ಅವರು ಕ್ರಾಂತಿಕಾರಿ ಚೈತನ್ಯವನ್ನು ಬೆಳೆಸಲು ಪತ್ರಿಕೆ ನಡೆಸಿ ಅಂತಹಸಾಹಿತ್ಯವನ್ನು ಸೃಷ್ಟಿಸುವೆನೆಂದು ನಿರ್ಧರಿಸಿದರು. ಮುನ್ನೂರು ರೂ.ಗಳನ್ನು ಒದಗಿಸಿಕೊಂಡು 'ವಿಪ್ಲವ' ಎಂಬ ಹೆಸರಿನ ಪತ್ರಿಕೆಯನ್ನು ಹೊರಡಿಸುವ ನಿರ್ಧಾರ ಕೈಗೊಂಡರು. ಅವರು ಬರೆದಿದ್ದಾರೆ:

"ರಾಜಕೀಯದಿಂದ ದೂರ ಉಳಿಯುವುದೆಂದರೆ ದೇಶ ಮತ್ತು ಸಮಾಜದ ವ್ಯವಸ್ಥೆ ಹಾಗೂ ಭವಿಷ್ಯದ ಜೊತೆ ಸಂಪರ್ಕ ಕಳೆದುಕೊಳ್ಳುವುದು ಎಂದರ್ಥ. ಅಂತಹ ಬೈರಾಗಿ ನಾನಲ್ಲ. ನನ್ನ ವಿದ್ಯಾರ್ಥಿ ಜೀವನದಲ್ಲಿ ಮೈಗೂಡಿಸಿಕೊಂಡಿದ್ದ ಭಾವನೆಗಳಿಗೆ ಜೈಲಿನಲ್ಲಿದ್ದಾಗ ಪೋಷಣೆ ಸಿಕ್ಕಿ, ಈಗ ಅಲ್ಲಿಂದ ಬಿಡುಗಡೆ ಹೊಂದಿದ ಮೇಲೆ ಅವುಗಳಿಗೆ ರೆಕ್ಕೆ ಮೂಡಿವೆ. ಈಗ ನಾನು ಏನು ಮಾಡಿದರೂ ಸಾಹಿತ್ಯದ ಮೂಲಕವೇ ಮಾಡುವೆನೆಂದು ನಿರ್ಧರಿಸಿಕೊಂಡೆ"(ಸಿಂಹಾವಲೋಕನ ಭಾಗ-೩ ಪುಟ ೧೮೦).

'ವಿಪ್ಲವ' ಶುರುವಾದದ್ದು ಈ ಭಾವನೆಯಿಂದಲೇ. ೧೯೩೮ರಲ್ಲಿ ಅದರ ಮೊದಲ ಅಂಕ ಹೊರಬಿತ್ತು. ಅದರ ಸಂಪಾದಕೀಯದಲ್ಲಿ ಅವರು ಬರೆದರು "ವಿಪ್ಲವದ ಜ್ವಾಲೆಯೇ, ದಲಿತ-ಪೀಡಿತ ಜನಶಕ್ತಿಯ ಉದ್ಗಾರಗಳೇ, ಏಳಿ, ಎಚ್ಚರಾಗಿ, ಸತ್ವ ಕಳೆದುಕೊಂಡು ಹಿಮವಾಗಿರುವ ಭಾರತದ ರಕ್ತಕ್ಕೆ ಕಾವು ನೀಡಿ. ಭಾರತ ನಿಮ್ಮತ್ತ ಕಣ್ಣು ಕೀಲಿಸಿ ಎದುರು ನೋಡುತ್ತಿದೆ. ದಬ್ಬಾಳಿಕೆಯ ರಕ್ತದ ಕೆಸರಿನಿಂದ ಹೊರಗೆಳೆಯಿರಿ. ಮಮತೆ-ಸಮತೆಗಳ ಸಮತಟ್ಟಾದ ನೆಲದ ಮೇಲೆ ಅದನ್ನು ನಿಲ್ಲಿಸಿ; ಮನುಷ್ಯತ್ವದ ವಿಕಾಸದ ಹಾದಿಯನ್ನು ಅದಕ್ಕೆ ಕಾಣಿಸಿರಿ". ಈ ಅಂಕದ ೭೨ ಪುಟಗಳಲ್ಲಿ ೨೮ ಪುಟಗಳನ್ನು ಸ್ವತಃ ಯಶಪಾಲ್ ಅವರೇ ಬರೆದರು. 'ಚಕ್ಕರ್ ಕ್ಲಬ್', 'ಚಹದ ಗುಟುಕುಗಳು', 'ಲಖನೌದ ಹರತಾಳಗಳು', 'ಪತ್ರೋತ್ತರ', 'ಒಂದು ಕಥೆ', 'ಒಂದು ನೆನಪು', 'ಸಂಪಾದಕೀಯ' ಎಂಬವು 'ವಿಪ್ಲವ'ದ ಅಂಕಣಗಳು. 'ಸಿಂಹಾವಲೋಕನ' ಮತ್ತು 'ಮಾರ್ಕ್ಸ್‌ವಾದದ ಪಾಠಶಾಲೆ' ಎಂಬ ತಲೆಬರಹದ ಅಂಕಣಗಳು ವಿಪ್ಲವದ ಮುಖ್ಯ ಆಕರ್ಷಣೆಯಾಗಿದ್ದವು.

ಯಶಪಾಲ್ ಅವರ ಗುಪ್ತನಾಮ ಮತ್ತು ಅಂಕಣದ ಶೀರ್ಷಿಕೆಗಳು

ಬದಲಾಗುತ್ತಿದ್ದವು. ಒಬ್ಬ ವಿದ್ಯಾರ್ಥಿ, ಒಬ್ಬ ಶಿಕ್ಷಾರ್ಥಿ, ಒಬ್ಬ ಬಲ್ಲವ, ಒಬ್ಬ ಕಾರ್ಮಿಕ, ರೈತ ಕಾರ್ಯಕರ್ತ, ರೈಲ್ವೇ ನೌಕರ, ಜಯ ಮಹಮದ್ ಹಿಂದೀ, ಚಂದ್ರ, ನಚಿಕೇತ, ಶಂಕರ ಮತ್ತು ವಿಚಕ್ಷಣ ಹೀಗೆಲ್ಲ ಗುಪ್ತ ಹೆಸರುಗಳಿರುತ್ತಿದ್ದವು. ಹಿಂದೆ ಬಾಂಬು ತಯಾರಿಸುತ್ತಿದ್ದಾಗ ಹೇಗೋ ಹಾಗೆ ಈಗ ವಿಪ್ಲವದ ಸಿದ್ಧತೆ, ಪ್ರಕಾಶನ ಮತ್ತು ಹಂಚಿಕೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಪತ್ರಿಕೆಗೆ ಅಭೂತಪೂರ್ವ ಸ್ವಾಗತ ದೊರೆಯಿತು. ಹಿಂದಿಯ ಹೆಸರಾಂತ ಬರಹಗಾರರೆಲ್ಲ ಬರೆಯತೊಡಗಿದರು. ಪ್ರಕಾಶವತಿ (ಯಶಪಾಲರ ಪತ್ನಿ) ಮೂರು ತಿಂಗಳು ಪರ್ಯಟನೆ ಮಾಡಿ ಐದು ನೂರು ಚಂದಾದಾರರನ್ನು ಗಳಿಸಿಕೊಂಡರು. ಒಂಭತ್ತು ತಿಂಗಳು ಕಳೆಯುವ ಹೊತ್ತಿಗೆ ಅದನ್ನು ದಿನಪತ್ರಿಕೆಯಾಗಿ ಸಾರಿದರು. ಆದರೆ ಅದು ಪೂರ್ಣಗೊಳ್ಳಲಿಲ್ಲ. ಆದರೂ ಅದರ ಉರ್ದು ಸಂಸ್ಕರಣ'ಬಾಗೀ'ಪ್ರಕಟಗೊಂಡಿತು.೧೯೪೦ ರಲ್ಲಿ ಸರ್ಕಾರ ಈ ಪತ್ರಿಕೆಗಳ ಲೇಖನಗಳ ಮೇಲೆ ವಕ್ರದೃಷ್ಟಿ ಬೀರಿತು. ಪ್ರಕಟಗೊಳ್ಳುವ ಪ್ರತಿ ಸಂಚಿಕೆಗೆ ಹನ್ನೆರಡು ಸಾವಿರ ರೂ. ಠೇವಣಿ ಇಡಬೇಕೆಂದು ಆಜ್ಞಾಪಿಸಿತು. ಪತ್ರಿಕೆ ನಿಂತು ಹೋಗಬೇಕಾದ ಸ್ಥಿತಿ ಬಂತು. 'ಸಾಥೀ' ಎಂಬ ಹೆಸರಿನಿಂದ ಬೇರೊಂದು ಪತ್ರಿಕೆ ಹೊರಡಿಸಬೇಕೆಂದರೆ ಅದಕ್ಕೆ ಅನುಮತಿ ಸಿಗಲಿಲ್ಲ. ಹೀಗಾಗಿ 'ವೈಪ್ಲವೀ ಟ್ರಾಕ್ಟ್' ಎಂಬ ಹೆಸರಿನಿಂದ ಬೇರೆ ಪ್ರಕಟಣೆ ಪ್ರಾರಂಭಗೊಂಡಿತು. ಖಾಯಂ ಅಂಕಣಗಳು ಬದಲಾದವು. ಯಶಪಾಲರನ್ನು ಬಂಧಿಸಲಾಯಿತು. ಜಾಮೀನಿನ ಮೇಲೆ ಬಿಡುಗಡೆ ಸಿಕ್ಕಿತು. ೧೯೪೦ರಲ್ಲಿ ಇದರ 'ಶೋಷಿತ ಅಂಕ' ಪ್ರಕಟಗೊಂಡಿತು. ಮುಂದಿನ ಸಂಚಿಕೆಯಲ್ಲಿ ಪ್ರಕಾಶಕರ ಹೆಸರು 'ಪ್ರಕಾಶವತಿ' ಆಯಿತು. ಅನಾರೋಗ್ಯದ ಕಾರಣ ಹವಾಸೇವನೆಗೆಂದು ಯಶಪಾಲರು ಕೆಲಕಾಲ 'ಬೆಟ್ಟ ಪ್ರದೇಶ'ಕ್ಕೆ ಹೋದರು. ಕೆಲ ಕಾಲದ ನಂತರ ಈ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಮಾರ್ಚ್ ೧೯೪೭ರಲ್ಲಿ 'ವಿಪ್ಲವ' ಮತ್ತೆ ಆರಂಭಗೊಂಡಿತು. ಈ ವೇಳೆಗೆ ವಾಮಪಂಥದ ಕವಿಗಳು ಮತ್ತು ಬರಹಗಾರರ ಒಂದು ದೊಡ್ಡ ತಂಡವೇ ಸಹಕಾರ ನೀಡಲು ಸಾಲುಗಟ್ಟಿ ನಿಂತಿತು. ಈ ಪತ್ರಿಕೆ ರೈತರ ಹಾಗೂ ಕೂಲಿಯಾಳುಗಳ ಹೋರಾಟ ಮತ್ತು ಅಧಿಕಾರಿಗಳಿಗೆ ವೇದಿಕೆಯಾಯಿತು. ಇದರ ಕಡೆಯ ಅಂಕ ಹೊರಬಂದಿದ್ದು ೧೯೪೯ರ ಮಾರ್ಚ್-ಏಪ್ರಿಲ್‌ನಲ್ಲಿ.

ಆಗಸ್ಟ್ ೧೫,೧೯೪೭ರ ಸ್ವಾತಂತ್ರ್ಯವನ್ನು ಯಶಪಾಲ್ ಅವರು 'ಮೌಂಟ್ ಬ್ಯಾಟನ್ ಮಾರ್ಕಿನ ಸ್ವಾತಂತ್ರ್ಯ'ವೆಂದು ಕರೆದರು. ಪ್ರಜಾವಿರೋಧಿ ನೀತಿಗಳನ್ನು ಪತ್ರಿಕೆಯಲ್ಲಿ ಬಲವಾಗಿ ಖಂಡಿಸುತ್ತಿದ್ದರು. ಸತ್ಯ, ಅಹಿಂಸೆ, ರಾಷ್ಟ್ರೀಯತೆ -ಇವುಗಳನ್ನು ಕುರಿತು ಸೈದ್ಧಾಂತಿಕ ಪ್ರಶ್ನೆಗಳನ್ನೆತ್ತುತ್ತಿದ್ದರು. ಕಾಂಗ್ರೆಸ್ ಸರ್ಕಾರವನ್ನು ಬಂಡವಾಳಶಾಹಿಗಳ ಸರ್ಕಾರವೆಂದು ಕರೆದರು. ಸರ್ಕಾರಕ್ಕೆ ಇದನ್ನು ಸಹಿಸಿಕೊಳ್ಳುವುದಾಗಲಿಲ್ಲ. ಅದು ಮೇಲೇರಿ ಬಂತು. ಕಡೆಯ ಅಂಕದಲ್ಲಿ ಇದರ

ಬಗ್ಗೆ ಸ್ಪಷ್ಟೀಕರಣವನ್ನು ನೀಡಿ ಹೀಗೆ ಬರೆದರು- "ಮಾರ್ಚ್ ೯,೧೯೪೯ರಿಂದ ಪ್ರಾರಂಭವಾಗಲಿರುವ ರೈಲ್ವೇ ಕಾರ್ಮಿಕರ ಹರತಾಳವನ್ನು ನೆಪ ಮಾಡಿಕೊಂಡು ಸರ್ಕಾರ ಎಲ್ಲ ಜನಪರ ಶಕ್ತಿಗಳ ಮೇಲೆ ಫ್ಯಾಸಿಸ್ಟ್ ದಬ್ಬಾಳಿಕೆ ಪ್ರಾರಂಭಿಸಿದೆ. ದೇಶಾದ್ಯಂತ ಕಾರ್ಮಿಕ-ರೈತ ಕಾರ್ಯಕರ್ತರನ್ನು ಬಂಧಿಸಿದೆ. ವಿದ್ಯಾರ್ಥಿ ಮುಂದಾಳುಗಳನ್ನು ಮುಂಜಾಗ್ರತೆ ನೆಪ ಒಡ್ಡಿ ಹಿಡಿದುಬಿಟ್ಟಿದೆ. ಇವರಲ್ಲಿ ವಿದ್ಯಾರ್ಥಿನಿಯರೂ ಇದ್ದಾರೆ. ಮಹಿಳಾ ಚಳುವಳಿಯ ಕಾರ್ಯಕರ್ತೆಯರನ್ನೂ ಬಿಟ್ಟಿಲ್ಲ. ಸಾಂಸ್ಕೃತಿಕ ಸಂಘ ಮತ್ತು ಜನ ನಾಟ್ಯ ಸಂಸ್ಥೆ ಮೊದಲಾದವುಗಳ ಸದಸ್ಯರನ್ನೂ ಜೈಲಿನಲ್ಲಿ ತುರುಕಿದ್ದಾರೆ. ಪ್ರಗತಿಶೀಲ ಪತ್ರಿಕೆಗಳಾದ 'ವಿಪ್ಲವ', 'ಜನಮತ'ದ ಪತ್ರಿಕಾ ಸಂಪಾದಕರನ್ನು ಸರ್ಕಾರ ಬಿಟ್ಟಿಲ್ಲ. 'ವಿಪ್ಲವ' ಪತ್ರಿಕೆಯನ್ನು ನಿಲ್ಲಿಸದೆ ಹೇಗಾದರೂ ಹೊರತರುತ್ತಿರುವುದೇ ಸರ್ಕಾರದ ದಬ್ಬಾಳಿಕೆಗೆ ನಾವು ಹಾಕಬಹುದಾದ ಸವಾಲು". ಪತ್ರಿಕೆಯನ್ನು ಹೇಗಾದರೂ ಹೊರತರುತ್ತಿರಬೇಕೆಂದು ಪ್ರಯತ್ನಗಳು ನಡೆದವು. ಆದರೆ ನಿಲ್ಲಿಸಲೇಬೇಕಾದ ಅನಿವಾರ್ಯತೆ ಬಂದೊದಗಿತು.

ಪತ್ರಿಕಾಕರ್ತರಾಗಿ ಯಶಪಾಲ್ ಅವರು ನಿರ್ವಹಿಸಿದ ಪಾತ್ರ ಬಹಳ ಮಹತ್ವಪೂರ್ಣವಾದುದು. ಅವರು ಘಟನೆಗಳನ್ನು ಅವುಗಳ ಗುಪ್ತವಾಹಿನಿಗಳನ್ನು ಗಮನಿಸಿಕೊಂಡು ಮಾರ್ಕ್ಸ್‌ವಾದಿ ದೃಷ್ಟಿಕೋಣದಿಂದ ಅವನ್ನು ವಿಶ್ಲೇಷಿಸುತ್ತಿದ್ದರು. ಈ ಸನ್ನಿವೇಶದಲ್ಲೇ ಅವರು ಗಾಂಧೀವಾದವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ 'ಗಾಂಧೀವಾದದ ಶವ ಪರೀಕ್ಷೆ' ಎಂದು ಅವರು ಹೆಸರಿಸಿದ ಬರಹವನ್ನು ಹೊರತಂದದ್ದು. 'ವಿಪ್ಲವ'ದ ಕೆಲಸ ಮಾಡುತ್ತಾ, ಗಾಂಧೀವಾದದೊಡನೆ ಸೈದ್ಧಾಂತಿಕ ಹೋರಾಟ ನಡೆಸುತ್ತಾ ಈ ಗ್ರಂಥದ ರೂಪರೇಷೆಗಳು ಅವರ ತಲೆಯಲ್ಲಿ ಸ್ಪಷ್ಟ ಆಕಾರವನ್ನು ಪಡೆದುಕೊಂಡಿದ್ದವು. 'ಮಾರ್ಕ್ಸ್‌ವಾದೀ ಪಾಠಶಾಲಾ' ಎಂಬ ಅಂಕಣವನ್ನು ಪ್ರಾರಂಭಿಸಿ 'ಮಾರ್ಕ್ಸ್‌ವಾದ'ದ ಮೇಲೆ ಒಂದು ಸೈದ್ಧಾಂತಿಕ ಗ್ರಂಥವನ್ನು ಬರೆದಿದ್ದರು. ಐತಿಹಾಸಿಕ ಭೌತಿಕವಾದದ ಪ್ರಕ್ರಿಯೆಯ ಸಂಪರ್ಕ ಅವರಿಗಾಗದಿದ್ದ ಕಾರಣ, ಪರಿಸ್ಥಿತಿಗಳ ಚಾರಿತ್ರಿಕ ಮಹತ್ವ ಹಾಗೂ ಅವುಗಳಲ್ಲಿನ ಅಂತರ್ವಿರೋಧವನ್ನು ಗುರ್ತಿಸುವಲ್ಲಿ ಅವರು ಒಂದಿಷ್ಟು ಎಡವಿರುವುದು ನಿಜ. ಅವರು 'ವಿಪ್ಲವ'ವನ್ನು ವಾಮಪಂಥದ ಚಿಂತನೆಯ ಮತ್ತು ಮುಕ್ತವಿಚಾರದ ವೇದಿಕೆ ಎಂದು ಕರೆದರು. ಅದನ್ನು 'ಕಮ್ಯೂನಿಸ್ಟ್ ಪಕ್ಷ'ದ ಪತ್ರಿಕೆಯಾಗಿಸಲಿಲ್ಲ. ಒಂದಿಷ್ಟು ಕಾಲ 'ರಕ್ತಾಭ್' ಪತ್ರಿಕೆಯ ಪ್ರಧಾನ ಸಂಪಾದಕರಾದರು. ನಂತರ ಕಮ್ಯೂನಿಸ್ಟ್ ಪಾರ್ಟಿಯ ಸಾಹಿತ್ಯಕ ಪತ್ರಿಕೆ 'ನಯಾ ಪಂಥ್'ದ ಸಂಪಾದಕರಾದರು. ಅಲ್ಲಿ ಶಿವ ವರ್ಮಾ ಮತ್ತು ರಾಜೀವ್ ಸಕ್ಸೇನಾ ಇವರ ಸಹಯೋಗಿಗಳಾಗಿದ್ದರು. ಯಶಪಾಲ್ ಅವರ ತೀಕ್ಷ್ಣ ಬೌದ್ಧಿಕತೆಯ ಗುರುತುಗಳು ಈ ಪತ್ರಿಕೆಗಳಲ್ಲೂ ಕಾಣಸಿಕೊಂಡಿವೆ.

## ಮಾರ್ಕ್ಸ್‌ವಾದದಲ್ಲಿ ನಿಷ್ಠೆ

ಯಶಪಾಲ್ ಅವರು ಕ್ರಾಂತಿಕಾರಿ ಬಣದಲ್ಲಿ ಒಬ್ಬರಾಗಿ ಹೋದ ತರುಣದಲ್ಲೇ ಮಾರ್ಕ್ಸ್‌ವಾದದೊಡನೆ ಸಂಪರ್ಕ ಬೆಳೆಸಿಕೊಂಡರು. ನೂರಾರು ಅಡೆತಡೆಗಳಿದ್ದರೂ ಸೋವಿಯತ್ ರಷ್ಯಾದಲ್ಲಿ ಪ್ರಕಟಗೊಂಡ ಸಾಹಿತ್ಯ ಇವರಿಗೆ ತಲುಪುತ್ತಿತ್ತು. ಹೀಗಾಗಿ ಇವರಿಗೆ ಅಲ್ಲಿ ಕಾರ್ಮಿಕರ ಒಳಿತಿಗೆಂದು ರೂಪುಗೊಂಡ ಯೋಜನೆಗಳ ಪರಿಚಯು ಆಗುತ್ತಿತ್ತು. ತರುಣರು ಮಾರ್ಕ್ಸ್‌ವಾದದತ್ತ ಬಹುಬೇಗ ವಾಲತೊಡಗಿದರು. ಭಗತ್‌ಸಿಂಹ, ಶಿವ ವರ್ಮಾ ಮತ್ತು ಯಶಪಾಲ್ ಅವರು ನಿಯಮಪೂರ್ವಕ ಮಾರ್ಕ್ಸ್‌ವಾದದ ಸಿದ್ಧಾಂತಗಳ ಅಧ್ಯಯನದಲ್ಲಿ ತೊಡಗಿದರು. ಶಿವ ವರ್ಮಾ ಅವರು ಮಾರ್ಕ್ಸ್‌ವಾದದ ಬಗ್ಗೆ ಬರೆದಿರುವ ಸಣ್ಣ ಸಣ್ಣ ಹೊತ್ತಿಗೆಗಳ ಮೂಲಕವೇ ಜನರಿಗೆ ಪರಿಚಿತವಾಗಿದ್ದಾರೆ. ಯಶಪಾಲ್ ಹಾಗೂ ಭಗತ್‌ಸಿಂಹ ಅವರ ಮಾರ್ಕ್ಸ್‌ವಾದದಲ್ಲಿರುವ ನಿಷ್ಠೆಯಂತೂ ಜಗಜ್ಜಾಹೀರ. ಭಗತ್‌ಸಿಂಹ ಅವರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದು ತೆರದಲ್ಲಿ ದಸ್ತಾವೇಜುಗಳೆನಿಸಿಕೊಂಡಿವೆ. ಯಶಪಾಲರು ಮಾರ್ಕ್ಸ್‌ವಾದವನ್ನು ಒಂದು ತಾತ್ವಿಕ ವಿಚಾರಧಾರೆ ಎಂದು ಒಪ್ಪಿಕೊಂಡಾಗಷ್ಟೇ, ತಮ್ಮ 'ವಿಪ್ಲವ'ದಲ್ಲಿ ಮಾರ್ಕ್ಸ್‌ವಾದದ ಪಾಠಶಾಲೆಯನ್ನು ಪ್ರಾರಂಭಿಸಿದರು. ಈ ಪಾಠಶಾಲೆಯಲ್ಲಿ ಪ್ರಕಟಗೊಂಡ ಲೇಖನಗಳನ್ನು ಆಧರಿಸಿಯೇ 'ಮಾರ್ಕ್ಸ್‌ವಾದ' ಎಂಬ ಪುಸ್ತಕವನ್ನು ಅವರು ಸಿದ್ಧಪಡಿಸಿದರು. ಇದರ ಮೊದಲ ಮುದ್ರಣ ಪ್ರಕಟಣೆಗೊಂಡದ್ದು ೧೯೪೦ರಲ್ಲಿ. ಅವರು ಪೀಠಿಕೆಯಲ್ಲಿ ಬರೆದರು: 'ಇದು ಕೇವಲ ಪರಿಚಯ ಮಾತ್ರ. (ಮಾರ್ಕ್ಸ್‌ವಾದದ ಬಗ್ಗೆ) ಆಳವಾದ ವೈಚಾರಿಕತೆ ಮತ್ತು ಅಧ್ಯಯನವನ್ನು ಪ್ರೇರೇಪಿಸುವುದೇ ಇದರ ಉದ್ದೇಶ. ಸಮಾಜವಾದವನ್ನು ಅರಿತುಕೊಳ್ಳಬೇಕಾದರೆ ಅದರ ಹುಟ್ಟಿಗೆ ಕಾರಣವಾದ ಸಾಮಾಜಿಕ ಕಾರಣಗಳನ್ನು ಅರಿತುಕೊಳ್ಳಬೇಕಾದುದು ಮತ್ತು ಉಳಿದೆಲ್ಲ ಸಿದ್ಧಾಂತಗಳೊಡನೆ ಅದರ ತೌಲನಿಕ ವಿಮರ್ಶೆ ನಡೆಸಬೇಕಾದದ್ದು ಅತ್ಯಗತ್ಯ'. ಆಗಿನ ದಿನಗಳಲ್ಲಿ ಹಿಂದೂಸ್ತಾನದಲ್ಲಿ ಮಾರ್ಕ್ಸ್‌ವಾದದ ಬಗ್ಗೆ ಇದ್ದ ಅರಿವು ಅತ್ಯಲ್ಪ. ಹೀಗಾಗಿ ಬಹಳ ಪ್ರಯತ್ನಿಸಿದರೂ ಅದನ್ನು ಗ್ರಹಿಸಿಕೊಳ್ಳುವಲ್ಲಿ ಯಶಪಾಲರಿಗೆ ಪೂರ್ಣ ಯಶಸ್ಸು ಸಿಗದಂತಹ ಕೊರತೆ ಈ ಪುಸ್ತಕದಲ್ಲಿ ಎದ್ದು ಕಾಣುತ್ತದೆ.

ಯಶಪಾಲರು ಈ ಪುಸ್ತಕ ಬರೆದ ಸಂದರ್ಭದಲ್ಲಿ ಡಗಲಸ್‌ವಾದ ನಾಜೀವಾದ, ಫಾಸೀವಾದ, ಪ್ರಜಾತಂತ್ರಾತ್ಮಕ ಸಮಾಜವಾದ, ಸಮಷ್ಟಿವಾದ ಗಾಂಧೀವಾದ, ಪ್ರಜಾತಂತ್ರವಾದ, ಅರಾಜಕತಾವಾದ ಹೀಗೆ ಎಲ್ಲ ವಾದಗ

ತಮ್ಮ ಬಲ ದಳಗಳನ್ನು ಪಣಕ್ಕಿಟ್ಟಿದ್ದವು. ಯಶಪಾಲರು ಈ ಎಲ್ಲ ವಾದಗಳನ್ನು ವಿಶ್ಲೇಷಿಸಿ ಅವುಗಳ ದೌರ್ಬಲ್ಯಗಳತ್ತ ಗಮನ ಸೆಳೆದರು. ಈ ರೀತಿಯ ವಿಶ್ಲೇಷಣೆಯ ಪರಿಣಾಮವಾಗಿ ಮಾನವನ ಮುಕ್ತಿಗೆ ಮಾರ್ಕ್ಸ್‌ವಾದ ಅಥವಾ ವೈಜ್ಞಾನಿಕ ಸಮಾಜವಾದವೇ ಸರಿಯಾದ ದಾರಿ ಎಂಬ ತೀರ್ಪು ತಾನೇ ತಾನಾಗಿ ಅಭಿವ್ಯಕ್ತವಾಯಿತು. ಯಶಪಾಲರು ಆಧ್ಯಾತ್ಮದ ಚಾರಿತ್ರಿಕ ವೈಶಿಷ್ಟ್ಯಗಳನ್ನು ಉಲ್ಲೇಖಿಸಿ, ಆಧ್ಯಾತ್ಮವಾದವು ವರ್ಗಭೇದ ಉಳ್ಳ ಸಮಾಜವನ್ನು ಸೃಷ್ಟಿಸುವಲ್ಲಿ ನೆರವಾಗುತ್ತಿರುವಾಗ, ಮಾರ್ಕ್ಸ್‌ವಾದವು ವರ್ಗರಹಿತ ಸಮಾಜವನ್ನು ಕಟ್ಟುವ ದೃಢ ನಿರ್ಧಾರ ಕೈಗೊಂಡಿದೆ ಎಂದು ಬರೆದರು. ತಾವು ಬರೆದ ಪುಸ್ತಕ 'ಮಾರ್ಕ್ಸ್‌ವಾದ'ದಲ್ಲಿ ಅವರು ಹೀಗನ್ನುತ್ತಾರೆ "ಭಗವಂತನ ಇಚ್ಛೆ ಮತ್ತು ನ್ಯಾಯ ನೀತಿಗಳಿಗನುಸಾರವಾಗಿ ಸಮಾಜದಲ್ಲಿ 'ಒಡೆಯ-ಆಳು', 'ರಾಜಾ-ಪ್ರಜೆ' ಎಂಬ ಕಟ್ಟಳೆ ಇದೆ ಎಂಬ ಉಪದೇಶವನ್ನು ಆಧ್ಯಾತ್ಮಿಕತೆ ಸದಾ ಕಾಲಕ್ಕೂ ನೀಡುತ್ತಾ ಬಂದಿದೆ ಎಂಬುದಕ್ಕೆ ಇತಿಹಾಸವೇ ಸಾಕ್ಷಿ. ಈ ವ್ಯವಸ್ಥೆಯಲ್ಲಿ 'ಆಳು ಹಾಗೂ ಪ್ರಜೆ', 'ಒಡೆಯ ಮತ್ತು ರಾಜ'ನನ್ನು ತಂದೆ, ಸ್ವಾಮಿ, ರಕ್ಷಕ ಎಂಬುದಾಗಿ ಒಪ್ಪಿಕೊಂಡು ಅವರನ್ನು ಸೇವಿಸಬೇಕು. ಅವರ ಆಜ್ಞೆಯನ್ನು ಅನುಸರಿಸಬೇಕು. ರಾಜ ಮತ್ತು ಒಡೆಯನ ವಿರುದ್ಧ ಬಂಡೇಳುವುದು ಸದಾ ಕಾಲಕ್ಕೂ ಪಾಪ ಮತ್ತು ಭಗವದೇಚ್ಛೆಗೆ ವಿರುದ್ಧವಾದದ್ದು ಎಂದು ಅರಿಯಲಾಗಿದೆ" (ಪುಟ ೪೫) ಮಾರ್ಕ್ಸ್‌ವಾದವು ಪ್ರತಿಪಾದಿಸುತ್ತಿದ್ದ ಮಾನವತಾ ವಾದಕ್ಕೆ ಆಗ ಗಾಂಧೀಜಿ ಸಮರ್ಥಿಸುತ್ತಿದ್ದ ರಾಮರಾಜ್ಯ ಒಂದು ದೊಡ್ಡ ಸವಾಲಾಗಿತ್ತು. ಮಾರ್ಕ್ಸ್‌ವಾದ ಹೇಳುವ ಎಲ್ಲ ಅಂಶಗಳು ರಾಮರಾಜ್ಯದ ಕಲ್ಪನೆಯಲ್ಲಿ ಇದೆಯೆಂದು ಜನಗಳಿಗೆ ತಿಳಿಸಿ ಹೇಳಲಾಗುತ್ತಿತ್ತು. ಈ ಕಲ್ಪನೆ ಭಾರತೀಯವಾದುದಾದ ಕಾರಣ ಎಲ್ಲ ರೀತಿಯಲ್ಲೂ ಉತ್ತಮವಾದುದೆಂದು ಸಮರ್ಥಿಸಿಕೊಳ್ಳಲಾಗುತ್ತಿತ್ತು. ಯಶಪಾಲರು ಇದೊಂದು ಭ್ರಾಂತಿ ಎಂದು ಜನಗಳಿಗೆ ಅರಿವು ಮಾಡಿಕೊಟ್ಟರು. ಈ ಅರಿವು ಮೂಡಲೆಂದೇ ಅವರು ಗಾಂಧೀಜಿ ಮತ್ತು ರಾಮರಾಜ್ಯದ ಬಗ್ಗೆ ಪುಸ್ತಕಗಳನ್ನು ಬರೆದರು. ಆಸ್ತಿಕವಾದಿಗಳ ಆರೋಪಗಳಿಗೆ ಈ ಎರಡು ಪುಸ್ತಕಗಳಲ್ಲಿ ಉತ್ತರಗಳಿವೆ. ಆಗ ಕೇಳಿ ಬರುತ್ತಿದ್ದ ಆಕ್ಷೇಪಗಳು ಹೀಗಿದ್ದವು. "ಭೌತಿಕ ವಾದದಲ್ಲಿನ ತಾತ್ವಿಕತೆ ಯಾಂತ್ರಿಕವಾದುದು. ಇದು ಪಾಶವಿಕ ಬಲಕ್ಕೆ ಒತ್ತುಕೊಡುತ್ತದೆ. ಹಿಂಸಾತ್ಮಕ ಕ್ರಾಂತಿಯ ಹಾದಿಯನ್ನು ಬೋಧಿಸುತ್ತದೆ. ಇದರಲ್ಲಿ ಮಾನವ ಮಾತ್ರದ ಬಗ್ಗೆ ಪ್ರೇಮಭಾವಕ್ಕೆ ಎಡೆ ಇಲ್ಲ. ಆರ್ಥಿಕ ವ್ಯವಸ್ಥೆಯೊಂದೇ ಎಲ್ಲ ಸಮಸ್ಯೆಗಳ ಕೇಂದ್ರ ಬಿಂದು. ಈ ಎಲ್ಲ ಹಠಮಾರಿತನದ (ಆಗ್ರಹಗಳ) ಕಾರಣ ಮಾರ್ಕ್ಸ್‌ವಾದವು ಶಾಶ್ವತವೆನಿಸಿರುವ ಮೌಲ್ಯಗಳನ್ನು ಬೀಳುಗಳೆಯುತ್ತದೆ". ಯಶಪಾಲರು ಈ ಎಲ್ಲ ಆಕ್ಷೇಪಗಳಿಗೂ ಬಹು ಆತ್ಮೀಯವೆನಿಸುವ ತರದಲ್ಲಿ ಚಕ್ಕರ್ ಕ್ಲಬ್, ನ್ಯಾಯ್ ಕಾ ಸಂಘರ್ಷ್, ಜಗ್ ಕಾ ಮುಜರಾ ಮುಂತಾದ -'ವಿಪ್ಲವ'ದ ಅಂಕಣಗಳಲ್ಲಿ ಉತ್ತರಿಸಿದ್ದಾರೆ.

ಈ ಎಲ್ಲ ಉತ್ತರಗಳು ಜನಸಾಮಾನ್ಯರ ಅರಿವಿಗೆ ಬರುವಂತಿದ್ದವು. ಅವರು ಧರ್ಮಾಂಧತೆ, ಬಂಡವಾಳಶಾಹಿ, ಸಾಮಂತವಾದ, ಗಾಂಧೀವಾದ ಹಾಗೂ ಪ್ರತಿಕ್ರಿಯಾವಾದ ಇವುಗಳನ್ನು ಕುರಿತು ವಿವರ ನೀಡಿ ಬರೆಯುತ್ತಿದ್ದರು. ಮಾರ್ಕ್ಸ್‌ವಾದಕ್ಕೆ ವಿರುದ್ಧವಾದ ಅಭಿಪ್ರಾಯಗಳಿಗೆ ಸಿಕ್ಕಿ ಬಿದ್ದಿದ್ದ ಮುಗ್ಧ ಜನರಿಗೆ ಎಲ್ಲವನ್ನೂ ತಿಳಿಸಿ ಹೇಳುವುದೇ ಅವರ ಉದ್ದೇಶವಾಗಿತ್ತು. ಬೇರೆ ಪತ್ರಿಕೆಗಳಲ್ಲಿ ಪ್ರಕಟಗೊಂಡ (ಮಾರ್ಕ್ಸ್‌ವಾದಿ) ವಿರೋಧವರರ ಲೇಖನಗಳನ್ನೆತ್ತಿಕೊಂಡು ತಮ್ಮ ಪತ್ರಿಕೆಗಳಲ್ಲಿ ಅದನ್ನು ವಾದಕ್ಕೆ ಸಿಕ್ಕಿಸಿಕೊಳ್ಳುತ್ತಿದ್ದರು. ಉದಾಹರಣೆಗೆ 'ರಾಷ್ಟ್ರಧರ್ಮ' ಪತ್ರಿಕೆಯಲ್ಲಿ ಪ್ರಕಟಗೊಂಡ ಮುನ್ನಿರಾಮ ಶರ್ಮಾ ಅವರ 'ಆರ್ಯ ಸಂಸ್ಕೃತಿ ಕೀ ರಕ್ಷಾ' ಎಂಬುದಕ್ಕೆ ಉತ್ತರವಾಗಿ ನಚಿಕೇತಾ ಎಂಬ ಹೆಸರಿನಿಂದ 'ಹಮಾರೀ ಸಂಸ್ಕೃತಿ ಔರ್ ಉಸಕೀ ರಕ್ಷಾ' ಎಂಬ ಲೇಖನವನ್ನು 'ವಿಪ್ಲವ'ದಲ್ಲಿ ಬರೆದರು. 'ಬೌದ್ಧ ಸಭ್ಯತಾ ಔರ್ ದಾಸತಾ' ಎಂಬ ವಿಷಯ ಕುರಿತು ಭದಂತ್ ಆನಂದ್ ಕೌಸಲ್ಯಾಯನ್ ಮತ್ತು ಗುರುದತ್ತರ ನಡುವೆ ಚರ್ಚೆ ನಡೆದಿತ್ತು. ಗಾಂಧೀಜಿ ಬಗ್ಗೆ ಅವರ ವಿರೋಧ ತಾತ್ವಿಕವಾದುದಾಗಿತ್ತು. ಗಾಂಧೀಜಿ ಮರಣಿಸಿದ ಸಂದರ್ಭದಲ್ಲಿ ಅವರು ಬರೆದರು "ದೇಶದ ಅತ್ಯಂತ ವಿಶ್ವಸ್ಥರೂ, ಪ್ರೀತಿಪಾತ್ರರೂ ಆದ ನೇತಾರರ ಹತ್ಯೆಯಿಂದ ದೇಶ ಖಿನ್ನವಾಗಿದೆ, ಶೋಕದಲ್ಲಿದೆ. ಧರ್ಮಾಂಧತೆಯ ಉನ್ಮಾದಕ್ಕೆ ಸೊಪ್ಪು ಹಾಕದೆ ರಾಷ್ಟ್ರದಲ್ಲಿ ನ್ಯಾಯ ನೆಲೆಗೊಳಿಸುವುದಕ್ಕಾಗಿ ಗಾಂಧೀಜಿ ತಮ್ಮನ್ನೇ ಬಲಿ ನೀಡಲು ಸಿದ್ಧರಾದರು."

'ಚಕ್ಕರ್ ಕ್ಲಬ್'ನಲ್ಲಿ ಯಶಪಾಲರು ತರಹೇವಾರಿ ಪಾತ್ರಗಳನ್ನು ಸೃಷ್ಟಿಸುತ್ತಿದ್ದರು. ಈ ಪಾತ್ರಗಳು ಬೇರೆ ಬೇರೆ ರೀತಿಯ ಅಭಿಪ್ರಾಯಗಳನ್ನು ಹೊಂದಿ ತಮ್ಮ ತಮ್ಮ ಪಕ್ಷದ ತರ್ಕಗಳನ್ನು ಮಂಡಿಸುತ್ತಿದ್ದವು. ಅಂಥವರಲ್ಲಿ ಒಬ್ಬ ಮಾರ್ಕ್ಸ್‌ವಾದಿಯೂ ಇರುತ್ತಿದ್ದ. ಅವನು ವಿಶ್ಲೇಷಣಾತ್ಮಕ ಸಂಭಾಷಣೆಗಳ ಮೂಲಕ ಅಂತಿಮ ತೀರ್ಪನ್ನು ತನ್ನತ್ತ ಹೊರಳಿಸಿಕೊಳ್ಳುತ್ತಿದ್ದ. ಸ್ವತಃ ಯಶಪಾಲರೇ ಲೇಖಕರಾಗಿ ಈ ಎಲ್ಲ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಎಲ್ಲ ಸಿದ್ಧಾಂತವಾದಗಳನ್ನು ತನ್ನ ವ್ಯೂಹದೊಳಕ್ಕೆಳೆದುಕೊಂಡು ಅವುಗಳ 'ಗತ್ಯಂತರ' ಇಷ್ಟೇ ಎಂದು ಬಯಲಿಗೆಳೆಯುತ್ತಿದ್ದರು.

ಯಶಪಾಲರ ಮಾರ್ಕ್ಸ್‌ವಾದ ಮಹಿಳೆಯರ ಮುಕ್ತಿಯ ಕೆಲಸವನ್ನು ಕೈಗೆತ್ತಿಕೊಂಡಿತು. ಈ ದೇಶದ ಹೆಣ್ಣು ಬಡಪಾಯಿ ಪ್ರಾಣಿ ಎಂದೇ ಅವರ ನಂಬಿಕೆ. ಇಂಗ್ಲಿಷರಿಗೆ ದಾಸಿ, ಸಾಮಂತೀ ಜೀವನ ಪದ್ಧತಿಗನುಸಾರವಾಗಿ ಧರ್ಮ ಮತ್ತು ಸಂಪ್ರದಾಯಗಳಿಗೆ ದಾಸಿ ಹಾಗೂ ಪತಿಗೆ ದಾಸಿ. ಅವಳನ್ನು ದೇವಿ ಎನ್ನುತ್ತಾರೆ. ಅವಳ ಸೌಂದರ್ಯವನ್ನು ಹಾಡಿ ಹೊಗಳುತ್ತಾರೆ. ಆದರೆ ಅವಳು ಅಂತಿಮವಾಗಿ ಭೋಗದವಸ್ತು. ಯಶಪಾಲರು ಬರೆದರು "ಹೆಣ್ಣನ್ನು ಕಷ್ಟದ ದುಡಿಮೆಗೆ ಒಗ್ಗಿಸದೆ, ಭೋಗಕ್ಕೆ ಹೆಚ್ಚು ಉಪಯುಕ್ತವೆನಿಸುವ ತೆರದಲ್ಲಿ ಅವಳನ್ನು

ಕೋಮಲವಾಗಿ ಬೆಳೆಸಿದರು. ಸಿಹಿ ತಿಂಡಿಯನ್ನು ಹೆಚ್ಚು ಆಕರ್ಷಣೀಯ ಮಾಡಲು ಅದಕ್ಕೆ ಬೆಳ್ಳಿಯ ವರ್ಕ್ ಹಚ್ಚಿ, ಸುಗಂಧ ಸಂಪಡಿಸುವಂತೆ ಹೆಣ್ಣಿನ ಕೇಶಕ್ಕೆ ಸುವಾಸನೆಯ ತೈಲ ಪೂಸಿ, ಅವಳ ಅಂಗೈಗೆ ಮದರಂಗಿ ಬಳಿದು, ಗಲ್ಲ ತುಟಿಗಳಿಗೆ ಕೆಂಪು ಹಚ್ಚಿದರು. ಅವಳ ಅಂಗಾಂಗಗಳನ್ನು ಚಿನ್ನ, ಬೆಳ್ಳಿ ಹಾಗೂ ಹೊಳಪಿನ ಮುತ್ತು ರತ್ನಗಳಿಂದ ಮುಚ್ಚಿಬಿಟ್ಟು ಅವಳನ್ನು ಹೆಚ್ಚು ಹೆಚ್ಚು ರಮಣೀಯವಾಗಿ ಕಾಣುವಂತೆ ಸಿಂಗರಿಸಿದರು"(ಚಕ್ಕರ್ ಕ್ಲಬ್, ಪುಟ-೭೬). "ಇವು ಹೆಣ್ಣಿಗೆ ಅಭ್ಯಾಸವಾಗಿ ಹೋಗುವ ಹಾಗೆ ಮಾಡಿದರು. ಇದೇ ತಮ್ಮ ಪಾಲಿಗೆ ಸ್ವಾತಂತ್ರ್ಯವೆಂದು ಅವರು ಭಾವಿಸಿಕೊಂಡರು. ಆಕರ್ಷಕವಾಗಿ ಕಾಣಿಸಿಕೊಳ್ಳಬೇಕೆಂಬುದು ಅವರ ಸ್ವಭಾವದ ಒಂದು ಮುಖವಾಯಿತು" ಎಂದು ಯಶಪಾಲರು ಬರೆದಿದ್ದಾರೆ. ಅವರು ಕಥೆಗಳು ಮತ್ತು ಕಾದಂಬರಿಗಳನ್ನು ಬರೆದು ಸ್ತ್ರೀಯರನ್ನು, ಬಹುಕೋಣಗಳಿಂದ ಕಂಡು ಈ ಎಲ್ಲ ಭ್ರಾಂತಿಗಳ ವಿರುದ್ಧ ಸಮರ ಸಾರಿ ತಮಗೆ ಸರಿಸಾಟಿಯಾದ ಲೇಖಕರಾರೂ ಮಾಡದ್ದನ್ನು ಈ ಕ್ಷೇತ್ರದಲ್ಲಿ ಸಾಧಿಸಿದರು. ಹೆಣ್ಣಿನ ಕೈಗೆ ಹೊಳಪಿನ ಕನ್ನಡಿಯನ್ನಿಟ್ಟು ವೇಶ್ಯೆ, ಕುಲಟೆ, ಪತಿವ್ರತೆ ಮೊದಲಾದ ರೂಪಗಳ ಹಿಂದೆ ಅಡಗಿರುವ ಭಾವನೆಗಳನ್ನು ಸ್ಪಷ್ಟವಾಗಿ ಕಂಡುಕೊಳ್ಳಿ ಎಂದರು. 'ಚಕ್ಕರ್ ಕ್ಲಬ್'ನಲ್ಲಿ ಅವರು ಬರೆದರು "ಸ್ತ್ರೀಯರನ್ನು ಆಧಾರವಾಗಿಟ್ಟುಕೊಂಡು ಬರೆದ ಸಾಹಿತ್ಯವೆಲ್ಲ ಮುಖ್ಯವಾಗಿ ಪುರುಷನ ಸಂತೃಪ್ತಿಗಾಗಿ ಬರೆದದ್ದು. ಪುರುಷನ ಒಡನಾಟದಿಂದ ಅವಳಿಗೆ ಸಿಗುವ ಸುಖವನ್ನು ಹೆಣ್ಣಿನ ಬಾಯಿಂದಲೇ ಬಣ್ಣಿಸಿದರು. ಗಂಡನ ವಿರಹದ ಬಳಲಿಕೆಗಳನ್ನು ಗೀತೆಗಳಾಗಿಸಿ ಅವರ ಬಾಯಲ್ಲಿ ಹಾಡಿಸಿದಾಗ ಅವರ ಆತ್ಮಾಭಿಮಾನಕ್ಕೆ ಸಾರ್ಥಕತೆ ದೊರಕಿತು" (ಪುಟ-೪೭).

ನಾಲ್ಕನೆಯ ದಶಕದಲ್ಲಿ ಸ್ತ್ರೀ ಪುರುಷರ ಸಂಬಂಧಗಳನ್ನು ಕುರಿತಾದ ಚರ್ಚೆ ಬಹು ವಿಪುಲವಾಗಿ ನಡೆದಿತ್ತು. ಹಿಂದೀ ಭಾಷೆಯ ಕೆಲವು ಲೇಖಕರು 'ಕಾಮಲಿಪ್ಸೆ'ಯನ್ನೇ ಸೃಷ್ಟಿಯ ಕೇಂದ್ರ ಬಿಂದು ಎಂದು ಗುರುತಿಸತೊಡಗಿದರು. ಅವರೆಲ್ಲರ ಮೇಲೆ ಫ್ರಾಯ್ಡ್‌ನ ಪ್ರಭಾವವಿತ್ತು. ಯಶಪಾಲರು ಸ್ತ್ರೀ-ಪುರುಷರ ಕಾಮ ಸಂಬಂಧಗಳ ಬಗ್ಗೆ ಬಹಳಷ್ಟು ಬರೆದರು. ಈ ಕಾರಣ ಅವರ ಮೇಲೂ ಫ್ರಾಯ್ಡ್‌ನ ಪ್ರಭಾವವೇ ಇದೇ ಎಂದು ಭಾವಿಸಿದರು. "ಹೆಣ್ಣು ಗಂಡು ಕೂಡಿರಬೇಕಾದರೆ ಮದುವೆ ಅಗತ್ಯವೇನಿಲ್ಲ: ಮದುವೆ ಆಗದೆಯೇ ಹೆಣ್ಣು ಗಂಡು ಬೆರೆತು ಸುಖಪಡಬಹುದು. ಹಾಗೆ ನೋಡಿದರೆ ಪ್ರೇಮವು ಲೈಂಗಿಕಾಂಕ್ಷೆಯ ಅಭಿವ್ಯಕ್ತಿಯೇ" ಎಂದು ಯಶಪಾಲರು ಅನ್ನುತ್ತಿದ್ದರು. ಈ ರೀತಿಯ ವ್ಯಾಖ್ಯೆ ನೀಡಿರುವ ಕಾರಣ ಯಶಪಾಲರ ಮೇಲೆ ಫ್ರಾಯ್ಡ್‌ನ ಅಂಶಿಕ ಪ್ರಭಾವ ಇರುವುದು ಕಂಡು ಬರುತ್ತದೆ. ಈ ಕಾರಣದಿಂದ ಅವರನ್ನು ಟೀಕಿಸಿದವರೂ ಉಂಟು. ರಾಮವಿಲಾಸ್ ಶರ್ಮಾ ಅವರು ಯಶಪಾಲ್‌ರ ಈ ಸೆಕ್ಸ್ ಪ್ರೇಮವನ್ನು 'ಸೀರೆ

ಕುಪ್ಪಸ ಕಳಚುವ ವಾದ' ಎಂದು ಹೆಸರಿಸಿ ಕರೆದರು.

ಯಶಪಾಲರು ಕಾಮ ಸಂಬಂಧಗಳನ್ನು ಕುರಿತೇ ಬರೆದರೆಂದು ಹೇಳುವುದು ಸರಿಯಲ್ಲ. ಆದರ್ಶವಾದಿಗಳು ಪ್ರತ್ಯಕ್ಷವಾಗಿ ಕಾಮವನ್ನು ದಮನ ಮಾಡಿದರೂ ಗೋಪ್ಯದಲ್ಲಿ ಅದನ್ನು ತುಷ್ಟಿಗೊಳಿಸಿಕೊಳ್ಳಲು ಉಪಾಯ ಹುಡುಕಿಕೊಳ್ಳುತ್ತಾರೆಂಬುದನ್ನು ಅವರು ತೋರಿಸಿದರು. ವಾಸ್ತವದಲ್ಲಿ ಯಶಪಾಲರು ವ್ಯಕ್ತಿಯ ಒಳಪದರುಗಳನ್ನು ಬಿಚ್ಚಿಟ್ಟರು. ಜೀವನದ ಎಲ್ಲ ಸಮಸ್ಯೆಗಳನ್ನು ಮಾರ್ಕ್ಸ್‌ವಾದಿ ದೃಷ್ಟಿಕೋಣದಿಂದ ವಿಚಾರ ಮಾಡಬೇಕು ಹಾಗೂ ಬರೆಯಬೇಕು ಎಂದು ಪ್ರಯತ್ನಿಸಿದರು. ಯಶಪಾಲರು ತಮ್ಮ ಕಥೆ, ಕಾದಂಬರಿಗಳಲ್ಲಿ ವಿಚಾರ ಮಾಡುತ್ತಾ ಬರೆಯುವ ಕ್ರಮವನ್ನೇ ಬಳಸಿದರು.

'ದಾದಾ ಕಾಮ್‌ರೇಡ್', 'ದೇಶದ್ರೋಹೀ', 'ಪಾರ್ಟೀ ಕಾಮ್‌ರೇಡ್', 'ಝೂಠಾಸಚ್', ಹಾಗೂ 'ಮೇರಿ ತೇರಿ ಉಸಕೀ ಬಾತ್' -ಈ ಎಲ್ಲವುಗಳಲ್ಲೂ ಇದೇ ರೀತಿಯ ತಾರ್ಕಿಕತೆಯನ್ನು ಕಾಣಬಹುದು. ಯಶಪಾಲರು ತರ್ಕಪ್ರೇಮಿಗಳು. ಆದುದರಿಂದಲೇ ತಾವು ಹಿಡಿದ ತರ್ಕದಲ್ಲಿ ಅಪರಿಪಕ್ವತೆ ಕಂಡುಬಂದಾಗ ತಮ್ಮ ನಿಲುವಿನಲ್ಲಿ ಬದಲಾವಣೆಯನ್ನು ತಂದುಕೊಳ್ಳುತ್ತಿದ್ದರು. ಆದುದರಿಂದಲೇ ಅವರಲ್ಲಿ ಕಡೆಯ ವರೆಗೂ ಬೆಳವಣಿಗೆಯ ಪ್ರಕ್ರಿಯೆ ಉಳಿದುಕೊಂಡದ್ದು. ತಮ್ಮ ಕೃತಿಗಳಲ್ಲಿ ಸಿದ್ಧಾಂತಗಳನ್ನು ಪರೀಕ್ಷೆಗೆ ಒಡ್ಡುತ್ತಿದ್ದರು. ಹಾಗೆಯೇ ಸಿದ್ಧಾಂತಗಳಿಂದ ಕೃತಿಗಳಲ್ಲಿ ಸತ್ಯಶೋಧನೆ ನಡೆಸುತ್ತಿದ್ದರು. ಈ ರೀತಿ ಮಾರ್ಕ್ಸ್‌ವಾದಿ ಲೇಖಕ ಮತ್ತು ವಿಚಾರಕ ಇವರ ನಡುವಣ ದ್ವಂದ್ವ ಅವರಲ್ಲಿ ಎಲ್ಲ ಕಾಲಕ್ಕೂ ಕಂಡು ಬರುವುದು. ಅವರು ಯಾವುದೇ ಸಂಗ್ರಾಮಕ್ಕಿಳಿಯಲಿ ಅಲ್ಲಿಂದ ಕಾಲು ಕೀಳಲಿಲ್ಲ. ಬದುಕು-ಕೆಲಸ-ಬರಹ ಈ ಉದ್ದೇಶಗಳ ದಾರಿಯಿಂದ ದೂರ ಸರಿಯಲಿಲ್ಲ. ನಿಜವಾದ ಅರ್ಥದಲ್ಲಿ ಅವರು ನಿಷ್ಠೆಗೆ ಸಮರ್ಪಿತಗೊಂಡ ಸೈನಿಕರಾಗಿದ್ದರು.

# ಕತೆಗಾರ ಯಶಪಾಲ್

ನ್ಯಾಷನಲ್ ಕಾಲೇಜಿನ ಜ್ವಲಂತ ಲೇಖಕ ಉದಯಶಂಕರ್ ಭಟ್ ಅವರ ಪ್ರೇರಣೆಯಿಂದ ಯಶಪಾಲರು ೧೯೨೪ರಲ್ಲಿ ಒಂದು ಕಥೆ ಬರೆದರು. ಇದು ಬರೇಲಿಯ ಪತ್ರಿಕೆ 'ಭ್ರಮರ್'ದಲ್ಲಿ ಪ್ರಕಟವಾಯಿತು. ಇದು ಅವರ ಪ್ರಕಟಿತ ಮೊದಲ ಕಥೆ. ಕತೆಗಾರರಾಗಿ ಕ್ರಮವರಿತು ಅವರ ಬರಹ ಆರಂಭಗೊಂಡದ್ದು 'ವಿಪ್ಲವ' ಕಾಲದಿಂದ. ಆಗ ಆರಂಭಗೊಂಡದ್ದು ಕಡೆ ತನಕ ನಡೆದಿತ್ತು. ಅವರ ಹೆಸರಾಂತ ಕಥಾಸಂಕಲನಗಳೆಂದರೆ - ಪಿಂಜರೇ ಕೀ ಉಡಾನ್-೧೯೩೯ (ಪಂಜರದ ಉಡ್ಡಾಣ), ವೋ ದುನಿಯಾ-೧೯೪೧ ( ಆ ಪ್ರಪಂಚ), ಜ್ಞಾನದಾನ್-೧೯೪೩, ಅಭಿಶಪ್ತ-೧೯೪೪ ತರ್ಕ ಕಾ ತೂಫಾನ್-೧೯೪೬ (ತರ್ಕದ ಬಿರುಗಾಳಿ), ಭಸ್ಮಾವೃತ ಚಿನಗಾರೀ-೧೯೪೬ (ಬೂದಿ ಮುಚ್ಚಿದ ಕಿಡಿ), ಫೂಲೋೀ ಕಾ ಕುರ್ತಾ-೧೯೪೯ (ಫೂಲೋೀಳ ಷರಟು), ಧರ್ಮಯುದ್ಧ-೧೯೫೦ ಉತ್ತರಾಧಿಕಾರೀ (೧೯೫೧), ಚಿತ್ರ ಕಾ ಶೀರ್ಷಕ್-೧೯೫೧ (ಚಿತ್ರದ ತಲೆಬರಹ), ತುಮನೇ ಕ್ಯೂಂ ಕಹಾ ಥಾ, ಮೈಂ ಸುಂದರ್ ಹೂಂ-೧೯೫೪ (ನಾನು ಸುಂದರಿ ಎಂದು ಏಕೆ ಅಂದೆ) ಉತ್ತಮೀ ಕೀ ಮಾಂ-೧೯೫೫(ಉತ್ತಮಿಯ ತಾಯಿ). ಓ ಭೈರವಿ ೧೯೫೮, ಸಚ್ ಬೋಲನೇ ಕೀ ಭೂಲ್-೧೯೬೨ (ನಿಜ ನುಡಿವ ಅಪರಾಧ), ಖಚ್ಚರ್ ಔರ್ ಆದಮೀ-೧೯೬೪ (ಹೇಸರುಗತ್ತೆ ಮತ್ತು ಮನುಷ್ಯ), ಭೂಖ್ ಕೇ ತೀನ್ ದಿನ್-೧೯೬೮ (ಹಸಿವಿನ ಮೂರು ದಿನಗಳು), ಲ್ಯಾಂಪ್ ಶೇಡ್-೧೯೭೯. ಯಶಪಾಲರು ತಾವು ಜೀವನದಲ್ಲಿ ಏನೆಲ್ಲವನ್ನು ಕಂಡರೋ, ಅದರ ಬಗ್ಗೆ ಪ್ರತಿಕ್ರಿಯಿಸಿದ್ದಾರೆ. ಆರ್ಯಸಮಾಜದಲ್ಲಿದ್ದುಕೊಂಡು ಬ್ರಿಟಿಷರನ್ನು ವಿರೋಧಿಸುವುದು ಅವರಿಗೆ ಸಮಂಜಸವೆನಿಸಿತು. ಆದರೆ ಮಾನವ ಸ್ವಭಾವಕ್ಕೆ ವ್ಯತಿರೇಕವಾದ ಸಂಯಮದ ಬಾಳು ಅವರಿಗೆ ಎಂದೂ ಸರಿ ಎನಿಸಲಿಲ್ಲ. ಮನಸ್ಸಿಗೆ ಸಮ್ಮತವೆನಿಸದಿದ್ದರೂ ಹೆಣ್ಣು-ಗಂಡು ಹೀಗೇ ಬಾಳಬೇಕೆಂಬ ಕಡ್ಡಾಯ ಮಾಡುವ ಉಪದೇಶಗಳನ್ನು ಅಲ್ಲಿ ನೀಡುತ್ತಾರೆಂಬುದನ್ನು ಅವರು ಕಂಡಿದ್ದರು. ಸ್ತ್ರೀ ಪುರುಷರ ಅಂತರ್ಯದಲ್ಲಿ ಹೆಪ್ಪುಗಟ್ಟಿಕೊಂಡ ಹೆಣ್ಣು-ಗಂಡಿನ ಸಂಬಂಧಗಳ ಪ್ರತಿಕ್ರಿಯೆಗಳೇ ಅವರ ಹೆಚ್ಚು ಪಾಲು ಕಥೆಗಳಲ್ಲಿ ಹೊರಹೊಮ್ಮಿವೆ. ಈ ತೆರನಾದ ಪ್ರತಿಕ್ರಿಯೆಗಳು ಅನುಪಾತಕ್ಕಿಂತ ಹೆಚ್ಚಾಗಿರುವ ಕಾರಣ ವಿಮರ್ಶಕರಿಗೆ ಯಶಪಾಲರಲ್ಲಿ ಫ್ರಾಯ್ಡ್‌ನ ಪ್ರಭಾವ ಕಂಡುಬಂದಿದೆ. ಒಂದು ವೇಳೆ ಇಂತಹ ಪ್ರಭಾವ ಅವರ ಮೇಲಾಗಿರುವುದು ನಿಜವೆಂದೆನಿಸಿದರೂ, ಅವರು ಅದರಿಂದ ಬಹುಬೇಗ ಹೊರಬಿದ್ದಿದ್ದಾರೆ. ಕಾಮವನ್ನು ವ್ಯವಸ್ಥೆಯೊಂದರ ಮೂಲಕ ಹತ್ತಿಕ್ಕುವುದನ್ನು ಈ ಪರಿಮಾಣದಲ್ಲಿ ಕಂಡುಂಡವನ ಮೇಲೆ ಫ್ರಾಯ್ಡ್ ಕೆಲವು ಕಾಲ ಪ್ರಭಾವ

ಬೇರಿರಬಹುದು. ಆದರೆ ಕಥೆಗಳನ್ನು ವಿಶ್ಲೇಷಿಸಿದಾಗ ಇದರ ಪರಿಣಾಮ ಹೆಚ್ಚು ಪ್ರಾಮಾಣಿಕವೆನಿಸಬಹುದು.

ಕಾಮ ಸಂಬಂಧಗಳಲ್ಲಿ ಯಶಪಾಲರ ಕಥೆಗಳ ಆಧಾರವೇ ಅನೇಕ ರೀತಿಯ ಸಮಸ್ಯೆಗಳನ್ನೆತ್ತಿಕೊಂಡು ಪರೀಕ್ಷಿಸುತ್ತದೆ. ಹೀಗೆ ಇಲ್ಲಿನ ಲೇಖಕ ಒಬ್ಬ ಪರೀಕ್ಷಕನೇ, ಅವನ ಅರಿವಿನ ಸೃಷ್ಟಿಯಲ್ಲಿ ಸಮಾಜದ ಅನೇಕ ಗೂಢ ರಹಸ್ಯಗಳು ಬಯಲಿಗೆ ಬರುತ್ತವೆ. ಎಲ್ಲ ಕಥೆಗಳೂ ತಮ್ಮ ತಮ್ಮ ಮಟ್ಟಿಗೆ ಸ್ವತಂತ್ರವಾದವುಗಳೇ. ಆದರೂ ಒಂದಕ್ಕೆ ಇನ್ನೊಂದು ಹೆಣೆದುಕೊಂಡಿವೆ. ಉದಾಹರಣೆಗೆ -ಪ್ರಾಯಶ್ಚಿತ್ತ, ಸಮಾಜ್ ಸೇವಾ, ನಿರ್ವಾಸಿತಾ, ತರ್ಕ ಕಾ ತೂಫಾನ್, ಜ್ಞಾನ್ ದಾನ್, ಪತಿವ್ರತಾ, ಉತ್ತಮೀ ಕಿ ಮಾಂ, ಪ್ರತಿಷ್ಠಾ ಕಾ ಬೋಝ್, ಅತಿಥ್ಯ, ದಾಸ್ ಧರ್ಮ, ಸಮಾಧೀ ಕೀ ಧೂಲ್, ರಿಸ್ಕ್, ದೂಸರೀ ನಾಕ್, ಜಹಾಂ ಹಸದ್ ನಹೀಂ, ಓ ಭೈರವೀ, ಶಿಕಾಯತ್, ಆಬರೂ, ಛಲಿಯಾ ನಾರೀ, ತುಮನೇ ಕ್ಯೂ ಕಹಾ ಥಾ, ಮೈಂ ಸುಂದರ್ ಹೂಂ, ಜಿಮ್ಮೇವಾರೀ ಇತ್ಯಾದಿ.

'ಪ್ರಾಯಶ್ಚಿತ್ತ' ಆರ್ಯ ಸಮಾಜದ ಕಟ್ಟುನಿಟ್ಟಾದ ಬಂಧನದಲ್ಲಿ ಬೆಳೆದು, ತನ್ನ ಸ್ವಾಭಾವಿಕ ಆಸೆ ಆಕಾಂಕ್ಷೆಗಳನ್ನು ಹತ್ತಿಕ್ಕಿಕೊಳ್ಳುತ್ತಿದ್ದ ಒಬ್ಬ ಹುಡುಗಿಯ ಕಥೆ, ಕಾಲಕ್ರಮದಲ್ಲಿ ಅವಳಿಗೆ ಅನುವು ದೊರೆತಾಗ ಅವಳ ಇಚ್ಛೆಗಳೆಲ್ಲಾ ಸಿಡಿದೇಳುತ್ತವೆ. ಅವಳು ಭಾಗಿಯಾಗುತ್ತಾಳೆ. ಆತ್ಮಹತ್ಯೆ ಮಾಡಿಕೊಳ್ಳಬೇಕಾದ ಪ್ರಸಂಗ ಬರುತ್ತದೆ. ಆಗ ಅವಳು ತಂದೆಗೆ ಕಾಗದ ಬರೆಯುತ್ತಾಳೆ. "ಗುರುಕುಲದ ಬ್ರಹ್ಮಚರ್ಯಾಶ್ರಮದಲ್ಲಿದ್ದಾಗಲೇ ನನ್ನ ಮನಸ್ಸಿನಲ್ಲಿ ಭೋಗಾಪೇಕ್ಷೆ ಬಲಗೊಂಡಿತ್ತು. ಆದರೆ ಅಧಿಷ್ಠಾತ್ರಿಗಳ ಬಾಯಿಂದ ಉಪದೇಶ ಕೇಳಿ ಕೇಳಿ ನನ್ನ ಅಪೇಕ್ಷೆಗಳನ್ನು ಹತ್ತಿಕ್ಕುತ್ತಿದ್ದೆ.... ಅಮೃತಸರಕ್ಕೆ ಬಂದ ನನಗೆ ಕಣ್ಣು ಕೋರೈಸಿ ಹೋದಾಂತಾಯಿತು. ನನ್ನೆಲ್ಲ ವಿಚಾರಶಕ್ತಿ ಅಳಿದು ಹೋಯಿತು. ಸಿಂಗಾರ ಮಾಡಿಕೊಂಡು, ಪರಿಮಳ ಬೀರುತ್ತಾ ಕುಲಕುವ ಹೆಂಗಳೆಯರನ್ನು ಕಂಡು ನನ್ನ ಜೀವನದ ಪವಿತ್ರ ಆದರ್ಶಗಳೇನು ಎಂಬುದನ್ನು ನೆನಪಿನಲ್ಲಿಡುವುದು ನನ್ನಿಂದ ಆಗದೆ ಹೋಯಿತು" (ಪಿಂಜರೇ ಕೀ ಉಡಾನ್ ೧೦೨). 'ಸಮಾಜ್ ಸೇವಾ'ದ ಕುಮಾರಿ ಉಷಾ ಮೆಹತಾ ಮದುವೆ ಮಾಡಿಕೊಳ್ಳದೆ ಜೀವನವಿಡೀ ಸಮಾಜ ಸೇವೆಗೆ ತೊಡಗಿಸಿಕೊಳ್ಳುತ್ತೇನೆಂದು ಪಣ ತೊಟ್ಟವಳು. ಇದ್ದಕ್ಕಿದ್ದಂತೆ ಸಂಯಮದ ಆವರಣ ಕಳಚಿ ಹೋಗಿ, ಕಾಮದ ಹೊಳೆ ಹುಚ್ಚಾಗಿ ಏರಿ ಪ್ರಮೋದನಾಥನನ್ನು ಕೂಡುತ್ತಾಳೆ. ಇದು ಕಡೆಗೆ ಪ್ರೇಮವಿವಾಹದಲ್ಲಿ ಪರ್ಯವಸಾನಗೊಳ್ಳುತ್ತದೆ. ಕಥೆಗೆ ಮುಕ್ತಾಯ ಹೀಗಿದೆ "ಉತ್ತರ ಹುಡುಕುತ್ತಿದ್ದ ನಾಥ, ಸಿಗರೇಟಿನ ಕಡೆಯ ದಂ ಎಳೆಯುತ್ತಾ ಅಂದ 'ಸಮಾಜ ಸೇವೆ ಅಲ್ಲ; ಸಮಾಜವನ್ನು ಬೆಳೆಸುವುದು' "(ಪಿಂಜರೇ ಕೀ ಉಡಾನ್, ಪುಟ-೪೫).

'ನಿರ್ವಾಸಿತಾ'ದ ನಾಯಕಿ ಇಂದು, ಕುರೂಪಿ ಹೆಣ್ಣು, ಆದರೆ ಅಧ್ಯಯನಶೀಲೆ. ಪ್ರತಿಭಾವಂತಳಾದ ಕಾರಣ ಅವಳಿಗೆ ಕಾಲೇಜಿನಲ್ಲಿ ಕೆಲಸ ಸಿಗುತ್ತದೆ. ಆದರೆ ಒಬ್ಬ ಯೋಗ್ಯ ಗಂಡಿನ ಸಹವಾಸಕ್ಕಾಗಿ ಹಾತೊರೆಯುತ್ತಾಳೆ. ಕುರೂಪಿಯಾದ ಕಾರಣ ಯಾವ ಗಂಡೂ ಅವಳತ್ತ ಸುಳಿಯುವುದಿಲ್ಲ. ಅವಳೆನ್ನುತ್ತಾಳೆ -ನಾಲ್ಕಾಣೆ, ಎಂಟಾಣೆಗೆ ತನ್ನನ್ನು ಮಾರಿಕೊಳ್ಳುವ ಗಂಡಿಗೆ ಇಂತಹ ಅಹಂಕಾರ, ಇಂತಹ ಸ್ಪರ್ಧೆ !" (ತರ್ಕ ಕಾ ತೂಫಾನ್, ಪುಟ-೧೭).

ಅಭಿಜಾತ ವರ್ಗದ ನೈತಿಕತೆಯೊಡನೆ ನಡೆವ ಇಂದುವಿನ ಹೋರಾಟ ಈ ಕಥೆಯನ್ನು ಪರಿಣಾಮದತ್ತ ಒಯ್ಯುತ್ತದೆ. ಅವಳನ್ನು ಮುಸೂರಿಯ ಹೋಟೆಲಿಂದ ಹೊರದೂಡಲಾಗುತ್ತದೆ. ಆದರೆ ತರ್ಕವು ಅವಳಿಗೆ ಮಾನಸಿಕ ವೇದನೆಯಿಂದ ಬಿಡುಗಡೆ ನೀಡುತ್ತದೆ. ಯುವಕ-ಯುವತಿಯರ ಮಾನಸಿಕತೆ ಹಾಗೂ ಅವರ ಆವೇಶಗಳನ್ನು ಹತ್ತಿಕ್ಕಿದರೂ ತರ್ಕ ಅವರಿಗೆ ನೆಮ್ಮದಿ ನೀಡುತ್ತದೆ ಎಂದು ಯಶಪಾಲರ ನಂಬುಗೆ. 'ತರ್ಕದ ಬಿರುಗಾಳಿ' ಅವರ ಇನ್ನೊಂದು ಕಥೆ. ಈ ಕಥೆಯಲ್ಲಿ ಪ್ರೇಮ ಹಾಗೂ ಯೌವನದಲ್ಲಿನ ಕಾಮನ ಹುಯಿಲನ್ನೊಳಹೊಕ್ಕು ಅದರ ಎಳೆ ಎಳೆಗಳನ್ನು ಬಿಡಿಸುತ್ತಾರೆ-ತರ್ಕದ ನೆರವಿನಿಂದ ಆದರ್ಶವಾದಿ ಭಾಷೆಯನ್ನು ಚಿಂದಿ ಚಿಂದಿ ಮಾಡಿದ್ದಾರೆ. "ತರ್ಕ್ ಕಾ ತೂಫಾನ್" ಸಂಕಲನದ ಮುನ್ನುಡಿಯಲ್ಲಿ ಅವರು ಹೀಗನ್ನುತ್ತಾರೆ "ಪುರುಷರ ಶವಗಳನ್ನು ಸಭೆ ಸಮಾರಂಭಗಳಲ್ಲಿ ತಂದಿಡುವುದಕ್ಕಾಗುತ್ತದೆಯೇ ? ಹೊಸ ವಿವೇಕ ಮತ್ತು ತರ್ಕವಷ್ಟೇ ಮನುಷ್ಯನಿಗೆ ದಾರಿ ತೋರಬಲ್ಲವು. ಸೌಂದರ್ಯಕ್ಕೆ ಬೆಲೆ ಕಟ್ಟುವಾಗಲೂ ತರ್ಕವೇ ಆಧಾರವಾಗಬೇಕು. ಸುಂದರ ಮತ್ತು ಅಸುಂದರವನ್ನು ಬೇರ್ಪಡಿಸಿ ಕಾಣುವುದು ಹಾಗೂ ಅಸುಂದರವನ್ನು ಸುಂದರವಾಗಿಸಲು ಉಜ್ಜುಗಿಸುವುದು ವಿವೇಕ ಮತ್ತು ತರ್ಕದ ಆಧಾರದಿಂದಲ್ಲದೆ ಹೇಗೆ ಸಾಧ್ಯ. ಆದುದರಿಂದ ಸೌಂದರ್ಯಕ್ಕೆ ಮೂಲ ತರ್ಕವೇ ಹೌದಲ್ಲವೇ ?" ಎಂದು ಅವರು ಪ್ರಶ್ನಿಸುತ್ತಾರೆ (ತರ್ಕ್ ಕಾ ತೂಫಾನ್, ಪುಟ-೬).

"ನೀವು ನಿಮ್ಮ ಅಂತರ್ಯದೊಳಗೆ ಒಮ್ಮೆ ಇಣುಕಿ ನೋಡಿಕೊಳ್ಳಿ" ಎಂದು ಅರಮನೆ, ಗುರುಮನೆ, ಮಸೀದಿ ಮತ್ತು ಸಮಾಜ ಸೇವಾ ಸಂಸ್ಥೆಗಳಿಗೆ ಯಶಪಾಲರು ಸವಾಲು ಹಾಕಿದ್ದಾರೆ. ಜನಗಳನ್ನು ಇಬ್ಬಗೆಯ ನಡಾವಳಿಗೆ ಗುರಿಪಡಿಸುವುದು ಇವರೆಲ್ಲರ ಆದರ್ಶವಾದವೇ. 'ಬಾಯಲ್ಲಿ ಶರಣಾರ್ಥಿ-ಕಂಕುಳಲ್ಲಿ ದೊಣ್ಣೆ' ಎಂಬ ಗಾದೆ ಮಾತು ಇಂತಹ ಆದರ್ಶವಾದದ ಅಂತರ್ವಿರೋಧದಿಂದ ಹುಟ್ಟಿ ಬಂದದ್ದೇ. ಉದಾಹರಣೆಗೆ 'ಜ್ಞಾನ್‌ದಾಸ್' ಎಂಬ ಅವರ ಕಥೆ. ಮಹರ್ಷಿ ದೀರ್ಘಲೋಮ ಈ ಕಥೆಯ ಮುಖ್ಯಪಾತ್ರ. ಆತ ತನ್ನ ಮಗಳು ಸಿದ್ಧಿಯನ್ನು ಮಾಯಾ ಬಂಧನಗಳಿಗೆ ವ್ಯತಿರೇಕವಾಗಿ ಪೂರ್ಣ ಬ್ರಹ್ಮಚರ್ಯದ ಉಪದೇಶಗಳಲ್ಲೇ ಬೆಳೆಸಿದ. 'ನೀಡಕ' ಎಂಬ ಯುವಕನೂ

ಬ್ರಹ್ಮಚರ್ಯೆಯು ದೀಕ್ಷೆಯಲ್ಲೇ ಬೆಳೆದ. ಅವನು ಬ್ರಹ್ಮಜ್ಞಾನ ಹಾಗೂ ತೀಕ್ಷ್ಣಬುದ್ಧಿ ಉಳ್ಳ ವಾಗ್ಮಿಯೂ ಆದ. ಚಾತುರ್ಮಾಸದ ಸನ್ಯಾಸಿಗಳ ಸಭೆಯಲ್ಲಿ ನೀಡಕನು ನೀಡುತ್ತಿದ್ದ ಉಪನ್ಯಾಸಗಳನ್ನು ಆಲಿಸಲು ಸಿದ್ಧಿಯೂ ಬರತೊಡಗಿದಳು. ಇಬ್ಬರ ದೃಷ್ಟಿ ಸಂಧಿಸಿದಾಗ ಬ್ರಹ್ಮಚರ್ಯ ಒಳ ಒಳಗೆ ಜಾರತೊಡಗಿತು. ಕಡೆಗೊಮ್ಮೆ ಇಬ್ಬರೂ ಕೂಡಿದರು. ನೀಡಕ ಹೇಳಿದ "ನಿಜ ಹೇಳು, ಅನೇಕ ವರ್ಷಕಾಲ ಸಮಾಧಿ ಹೂಡಿ ಪರಮ ಸುಖದಲ್ಲಿ ತಲ್ಲೀನಳಾಗಿ ನಿನ್ನನ್ನೇ ನೀನು ಮರೆತು ಪ್ರಪಂಚವನ್ನು ಮರೆಯಲೆತ್ನಿಸಿದರೂ, ಇಂದಿನ ಸಂಪೂರ್ಣ ರಾತ್ರಿಯ ಆತ್ಮವಿಸ್ಮೃತಿಯ ತೃಪ್ತಿ ನಿನಗೆ ಎಂದಾದರೂ ಸಿಕ್ಕಿತ್ತೇ ?" (ಜ್ಞಾನದಾನ, ಪುಟ-೨೨).

ನಮ್ಮ ಸಮಾಜದಲ್ಲಿ ಒಂದು ವಿಸಂಗತಿ (ಅಂತರ್ವಿರೋಧ) ಇದೆ. ಅದೇನೆಂದರೆ ಗಂಡು ತನ್ನ ಹೆಂಡತಿ ಪತಿವ್ರತೆಯಾಗಿ ಉಳಿಯಬೇಕು, ಉಳಿದ ಸ್ತ್ರೀಯರು ಜಾರಿಣಿಯರಾಗಬೇಕು. ತನ್ನ ಮಗಳು ಕುಲಶೀಲೆಯಾಗಿರಬೇಕು, ಉಳಿದೆಲ್ಲ ಹೆಣ್ಣು ಮಕ್ಕಳು ತನಗೆ ಪ್ರೇಮಿಕೆಯರಾಗಿ ದೊರಕಬೇಕು ಎಂದು ಬಯಸುತ್ತಾನೆ. ಗಂಡು ಕುರೂಪಿಯಾದ ಹೆಣ್ಣನ್ನು ಭೋಗಿಸಲು ಸಿದ್ಧ: ಆದರೆ ಅವಳನ್ನು ಮದುವೆ ಆಗಲು ಒಪ್ಪುವುದಿಲ್ಲ. ಆದರೆ ಉಳಿದೆಲ್ಲ ರಮಣಿಯರ ಬಗ್ಗೆ ಅವನಲ್ಲಿರುವಂತಹ ವಿಚಾರಗಳೇ ತನ್ನ ಹೆಂಡತಿ ಮತ್ತು ಹೆಣ್ಣು ಮಕ್ಕಳ ಬಗ್ಗೆ ಬೇರೆ ಗಂಡಸರಲ್ಲಿ ಇರುವುದು ಸಹಜ ಎಂಬ ಅಂಶವನ್ನು ಅವನು ಮರೆಯುತ್ತಾನೆ. ಪುರುಷನ ಮಾನಸಿಕತೆಯ ಬಗ್ಗೆ ತಮ್ಮ 'ಪಾಂವ್ ತಲೇ ಕೀ ಡಾಲ್' (ಕಾಲು ಕೆಳಗಿನ ಕೊಂಬೆ) ಎಂಬ ಒಂದು ಕಥೆಯ ಪಾತ್ರವೊಂದರ ಬಾಯಲ್ಲಿ ಹೀಗೆ ಅನಿಸಿದ್ದಾರೆ "ಪ್ರತಿ ಹೆಣ್ಣು ಯಾರದೋ ತಂಗಿಯೋ, ಮಗಳೋ, ಹೆಂಡತಿಯೋ ಆಗಿರುತ್ತಾಳೆ. ನಿನ್ನ ತಂಗಿಯೇ ನಿನ್ನ ಲೋಲುಪ ವಿಚಾರವನ್ನು ಕಂಡು ಮೂಗು ಮುರಿಯಬಹುದು. ಗಂಡೆಂದ ಮಾತ್ರಕ್ಕೆ ಲಜ್ಜೆಗೇಡಿತನಕ್ಕೆ ಪರವಾನಗಿ ಅಲ್ಲ. ನೀನು ಪ್ರಜಾತಂತ್ರ ಮತ್ತು ಸಮಾನತೆಯ ಮಾತೆತ್ತುತೀಯೋ; ಪ್ರಜಾತಂತ್ರ ಮತ್ತುಸಮಾನತೆಯನ್ನುಳ್ಳ ಸಮಾಜದಲ್ಲಿ ಸರ್ವರಿಗೂ ಸಮಾನವಾಗಿ ಅನ್ವಯಿಸುವ ನೈತಿಕತೆ ಮತ್ತು ಸುಖ ಭೋಗಗಳಿರಬೇಕು" (ಚಿತ್ರ ಕಾ ಶೀರ್ಷಕ್, ಪುಟ-೮೨). ಪ್ರತಿ ಹೆಂಡತಿ ಮತ್ತು ಮಗಳ ಶುದ್ಧ ಚಾರಿತ್ರ್ಯವನ್ನು ಉಳಿಸಿಕೊಳ್ಳುವುದು ಹೇಗೆ ? ಎಂಬುದೇ ಇಲ್ಲಿನ ಮೂಲಭೂತ ಪ್ರಶ್ನೆ. ಕಾಮುಕತೆ ಇಂತಹ ವಿವೇಕದ ಸೊಲ್ಲಡಗಿಸುತ್ತದೆ. ಯಶಪಾಲರು ನಿದ್ರೆಗೊಳಗಾಗಿರುವ ವಿವೇಕವನ್ನು ಜಾಗರಿಸುತ್ತಾರೆ. ಉದಾಹರಣೆಗೆ 'ತೀಸ್ ಮಿನಿಟ್' ಎಂಬ ಕಥೆಯಲ್ಲಿ ಕಾಮಮೋಹಿತಳಾದ ರತ್ನಾಳನ್ನು ಅವಳ ಪ್ರಿಯಕರ ಎಚ್ಚರಿಸುತ್ತಾನೆ "ಏನು ಮಾಡುತ್ತಿದ್ದೀ ನೀನು: ನಾನು ನನ್ನ ಹೆಂಡತಿಯ ಶೀಲವನ್ನು ಮಾರಿಕೊಳ್ಳಬೇಕೇ ? (ಅವನ ದೃಷ್ಟಿಯಲ್ಲಿ ರತ್ನಾಳನ್ನು ವಿವಾಹೇತರ ಸಂಬಂಧದಲ್ಲಿ ಕೂಡುವುದು ಅಂದರೆ ತನ್ನ ಹೆಂಡತಿಯ ಶೀಲವನ್ನು ಮಾರಿಕೊಂಡಂತೆ)." ಯಶಪಾಲರ ದೃಷ್ಟಿ

ನಿಚ್ಚಳಗೊಳ್ಳುವುದು ಇಂಥಲ್ಲೇ, 'ವರ್ಗ ಭೇದವುಳ್ಳ ಸಮಾಜದಲ್ಲಿ ಹೆಣ್ಣು ಗಂಡುಗಳ ನೈತಿಕತೆಗಳು ಬೇರೆ ಬೇರೆ' -ಈ ವಿಚಾರವನ್ನು ತಮ್ಮ ಪಾತ್ರಗಳ ಮೂಲಕ ತೋರಿಸಿ ಕೊಡುತ್ತಾರೆ.

'ಉತ್ತಮೀ ಕೀ ಮಾಂ' ಕಥೆಯ ಉತ್ತಮೀ ರೂಪವತಿ. ಅವಳನ್ನು ಮದುವೆ ಆಗಲು ಯಾರೂ ಮುಂದೆ ಬಂದಾರು. ಆದರೆ ಸಿಡುಬು ಎದ್ದು ಅವಳ ಮುಖ ಕೆಟ್ಟು ಹೋಗುತ್ತದೆ. ಹೀಗಾದಾಗ ಅವಳಿಗೆ ನಿಶ್ಚಯವಾಗಿದ್ದ ಗಂಡು ಅವಳನ್ನು ಒಲ್ಲೆ ಎನ್ನುತ್ತಾನೆ. ಉಳಿದವರು ಯಾರೂ ಅವಳನ್ನು ಮದುವೆಯಾಗಲು ಒಪ್ಪುವುದಿಲ್ಲ. ಅವಳ ಯೌವನವನ್ನು ಉಪಭೋಗಿಸಲು ಎಲ್ಲರೂ ಸಿದ್ಧರೇ; ಆದರೆ ಮದುವೆ ಮಾಡಿಕೊಳ್ಳಲು ಯಾರೂ ತಯಾರಿಲ್ಲ. ಕಡೆಗೆ ಅವಳಿಗೆ ಆಶ್ರಯ ದೊರಕುವುದು ಸಂನ್ಯಾಸಿಗಳ ಸತ್ಸಂಗದಲ್ಲಿ. ಆ ಸತ್ಸಂಗದಲ್ಲಿ ಅವಳು ಕಣ್ಣುಮುಚ್ಚಿ ಧ್ಯಾನಾಸಕ್ತಳಾಗಲು ಪ್ರಯತ್ನಿಸುತ್ತಾಳೆ. ಆದರೆ ಅವಳ ಕಾಮೇಚ್ಛೆ ಅವಳನ್ನು ಒಳಗೊಳಗೇ ಧಹಿಸುತ್ತದೆ. ಈ ಜ್ವಾಲೆಯೇ ಅವಳನ್ನು ಕಡೆಗೆ ಬಲಿ ತೆಗೆದುಕೊಳ್ಳುತ್ತದೆ. 'ಪತಿವ್ರತಾ' ಎಂಬ ಕಥೆಯಲ್ಲಿ ವಿದ್ಯಾವಂತಳಾದ ಸುಮತಿ, ವರದಕ್ಷಿಣೆ ಕೊಡಲಾರದ ಸ್ಥಿತಿಯಲ್ಲಿ ಸೇಠ್ ಒಬ್ಬನ ಮೂರನೆಯ ಹೆಂಡತಿ ಆಗುತ್ತಾಳೆ. ಅವಳು ಪತಿ ಪರಾಯಣೆಯಾಗಿ ಆದರ್ಶ ಜೀವನ ನಡೆಸುತ್ತಾಳೆ. ಅವಳ ಗಂಡ ಬೊಜ್ಜು ದೇಹದವನಾದರೂ, ಬಾಯಿ ದುರ್ಗಂಧದಿಂದ ನಾರುತ್ತಿದ್ದರೂ ಹೊಸ ಹೊಸ ವಧುಗಳನ್ನು ಹುಡುಕಿ ಮದುವೆ ಆಗುತ್ತಾನೆ. ಸಾಲದ್ದಕ್ಕೆ ಹಣ ಚೆಲ್ಲಿ ಸೂಳೆಯರ ಸಂಗ ಮಾಡುತ್ತಾನೆ. 'ನೀಹಾರ್' ಎಂಬ ವೇಶ್ಯೆಗೆ ಅಪಾರ ಹಣ ತೆತ್ತು ಅವಳನ್ನು ಭೋಗಿಸಲು ಹವಣಿಸುತ್ತಾನೆ. ಆದರೆ ಅವಳು ಅವನ ಬೊಜ್ಜು ದೇಹವನ್ನು ತಿರಸ್ಕರಿಸುತ್ತಾಳೆ. ಆಗ ಸುಮತಿಯ ಮನಸ್ಸಿನಲ್ಲಿ ವಿಚಾರದ ಅಲೆಗಳೇಳುತ್ತವೆ 'ಸಮಾಜ ಯಾರನ್ನು ವೇಶ್ಯೆ' ಎಂದು ಕರೆಯುತ್ತದೆಯೋ ಅವಳು ಎಷ್ಟು ಬಲಿಷ್ಠ; ಆದೇ ತಾನು ಗರತಿ. ಆದರೆ ಎಷ್ಟು ನಿಸ್ಸಹಾಯಕಳು.

ಯಶಪಾಲರ 'ಧರ್ಮರಕ್ಷಾ', 'ಪ್ರತಿಷ್ಠಾ ಕಾ ಬೋಝ್', 'ಆತಿಥ್ಯ' ಅಥವಾ 'ವೈಷ್ಣವೀ', 'ಶಿಕಾಯತ್', 'ಜಹಾಂ ಹಸದ್ ನಹೀಂ', 'ಛಲಿಯಾ ನಾರೀ', 'ತುಮನೇ ಕ್ಯೂಂ ಕಹಾ ಥಾ ಮೈ ಸುಂದರ್ ಹೂಂ' ಮೊದಲಾದ ಎಲ್ಲ ಕಥೆಗಳು ಸಮಾಜದೊಳಗಣದ್ದು. ಇವೆಲ್ಲಾ ಸಮಾಜದಲ್ಲಿ ವಿದ್ಯಮಾನವಿರುವ ಪ್ರವೃತ್ತಿಗಳಿಂದಲೇ ನಿರ್ಮಿತಿ ಪಡೆದವುಗಳು. ಧರ್ಮದ ಹೆಸರಿನಲ್ಲಿ ಸ್ತ್ರೀಯರ ಮೇಲೆ ನಡೆವ ಅತ್ಯಾಚಾರಗಳನ್ನು ಲೇಖಕರು ಬಹಳ ಧೈರ್ಯವಾಗಿ ಮುಂದಿಟ್ಟಿದ್ದಾರೆ. ವರದಕ್ಷಿಣೆ ಪದ್ಧತಿ, ವೇಶ್ಯಾವೃತ್ತಿ, ಬಹುವಿವಾಹ ಮೊದಲಾದ ಸಾಮಾಜಿಕ ವಿಕೃತಿಗಳು ತಮ್ಮ ನಿಜರೂಪದಲ್ಲಿ ಇಲ್ಲಿ ಸಾಕಾರಗೊಂಡಿವೆ. ಇಲ್ಲಿನ ಹೆಣ್ಣು ಕೊಳೆಯುವುದಿಲ್ಲ. ಅದರಿಂದ ಹೊರಬರುತ್ತಾಳೆ. ಮುಖವಾಡಗಳನ್ನು

ಕಿತ್ತೆಸೆಯುತ್ತಾಳೆ. ಹತ್ತಿಕ್ಕಲಾಗದ ಕಾಮನೆಗಳನ್ನು ಸಂತವಿಡಲು ಅಗತ್ಯವೆನಿಸುವ ತೃಪ್ತಿ ಮತ್ತು ಸುಖದ ಹಾದಿಗಳು ತೆರೆದುಕೊಳ್ಳುವುದಿಲ್ಲ. ಅವಳು ಯಥಾರ್ಥದ ದಾರಿಯಲ್ಲಿ ಮುನ್ನಡೆದು ಕೃತ್ರಿಮವಾದ ಬಂಧನಗಳನ್ನು ಕಿತ್ತೊಗೆದು ಸಹಜ ಪ್ರೇಮದ ಮಾರ್ಗವನ್ನು ಕಂಡುಕೊಳ್ಳುತ್ತಾಳೆ. ಸದಾಶಿವ್ ದ್ವಿವೇದಿಯವರು ಇದರ ಬಗ್ಗೆ ಸುಸಂಗತವಾಗಿ ಬರೆಯುತ್ತಾರೆ. "ಸೆಕ್ಸ್ ಇಲ್ಲದೆ ಪ್ರೇಮ ಪೂರ್ಣವೆನಿಸುವುದು ಆಗದ ಮಾತು. ಈ ತಥ್ಯ ಎಷ್ಟು ಮಟ್ಟಿಗೆ ಯಥಾರ್ಥವೆಂದರೆ ಮನುಷ್ಯನ ಶರೀರದಲ್ಲಿ ರಕ್ತ ಪರಿಚಲನೆ ಆಗದೆ ಅವನು ಬದುಕಿ ಉಳಿದಿರುವುದು ಸಾಧ್ಯವಿಲ್ಲವೆನ್ನುವಷ್ಟೇ ಸತ್ಯ. ನಮಗೆ ಸೆಕ್ಸ್ ಬಗ್ಗೆ ತಿರಸ್ಕಾರ ಬರುವುದು ಅದು ಪ್ರೇಮದಿಂದ ಬೇರಾಗಿ ಉಳಿದುಕೊಂಡಾಗ. ಪ್ರೇಮದ ಅನನ್ಯ ತೃಪ್ತಿ ಸೆಕ್ಸ್ ಮಾಧ್ಯಮದಿಂದ ಸಿಗದ ಸ್ಥಿತಿಯಲ್ಲಿ ನಮಗೆ ಪ್ರೇಮದಲ್ಲಿ ನಿರಾಶೆ ಉಂಟಾಗುತ್ತದೆ" (ಕ್ರಾಂತಿಕಾರೀ ಯಶಪಾಲ್-ಸಂಪಾದಕ: ಮಧುರೇಶ್ ಪುಟ-೧೮೨). ಯಶಪಾಲರು ತಮ್ಮ ಕಥೆಗಳ ಮೂಲಕ ಸೆಕ್ಸ್ ಅನ್ನು ಪಶ್ಚಿಮದ ಉಚ್ಛೃಂಖಲ ದಾರಿಯನ್ನಾಗಲೀ ಅಥವಾ ಮುಕ್ತ ಸಂಭೋಗದ ಹಾದಿಯನ್ನಾಗಲಿ ಮಾಡಿಕೊಳ್ಳಲಿಲ್ಲ. ಅವರು ದೇಹದಲ್ಲಿ ಅಡೆತಡೆ ಇಲ್ಲದೆ ರಕ್ತಪ್ರವಹಿಸಿ ಗಂದಿ ಬೆಳೆಯದ ಹಾಗೆ ಗ್ರಂಥಿಗಳನ್ನು ಬಿಚ್ಚುತ್ತಾರೆ. ಅವರ ಕಥೆಗಳಲ್ಲಿ ಪ್ರೇಮ ಮತ್ತು ಸೆಕ್ಸ್ ನಡುವೆ ಸಾಪೇಕ್ಷ ಸಂಬಂಧ ಬೆಳೆಯುತ್ತದೆ. ಅಲ್ಲಿ ಲೈಂಗಿಕತೆ ಏರ್ಪಡುವುದಿಲ್ಲ. ಇಲ್ಲಿನ ಸ್ತ್ರೀಯರು ಪರಿಪಕ್ವಗೊಂಡವರು. ಅವರು ಸಕ್ರಿಯ ಭಾವಾತ್ಮಕ ಸಂವೇದನೆಗಳಿಂದ ಚಾಲನೆ ಪಡೆಯುತ್ತಾರೆ. ತಮ್ಮ ಸ್ವತಂತ್ರವಾದ ಅಸ್ತಿತ್ವವನ್ನು ಪಡೆದುಕೊಳ್ಳುವುದರಲ್ಲಿ ಅವರು ಸಫಲರಾಗುತ್ತಾರೆ. ಅವರು ಯಥಾಸ್ಥಿತಿಯನ್ನು ಒಪ್ಪಿಕೊಳ್ಳುವುದಿಲ್ಲ. ಅದನ್ನು ವಿರೋಧಿಸುತ್ತಾರೆ. ಅವರೇ ಸ್ವತಃ ದಾರಿ ಹುಡುಕುತ್ತಾರೆ. ಯಶಪಾಲರು 'ರಜಿಯಾ', 'ನಂದಿ', 'ಕೋಕಲಾ' ಮೊದಲಾದ ನಾಯಕಿಯರನ್ನು ಸೃಷ್ಟಿಸಿ ಆ 'ಚಾರಿತ್ರ್ಯ'ಗಳಿಗೆ ಆತ್ಮಾಭಿಮಾನವನ್ನು ನೀಡಿದ್ದಾರೆ. 'ಚಿತ್ರ ಕಾ ಶೀರ್ಷಕ್' ನಂತಹ ಕಥೆಗಳ ಮೂಲಕ ಮನೋವೈಕಲ್ಯ ಹಾಗೂ ಆತ್ಮಗ್ಲಾನಿಗಳಿಗೆ ಸಮಾಧಾನ ನೀಡಲಾಗಿದೆ. ಈ ಸಮಾಧಾನ ಮನೋವೈಜ್ಞಾನಿಕವಾದದ್ದು. ಇದರಲ್ಲಿ ಸುಧಾರಣೆಯ ಗೆರಗಳಷ್ಟೇ ಮೂಡುವುದಿಲ್ಲ, ಪಾತ್ರಗಳ ಏಳು-ಬೀಳುಗಳ ದ್ವಂದ್ವಾತ್ಮಕ ರೀತಿ ರೂಪುಗೊಳ್ಳುತ್ತದೆ. ಆರ್ಯ ಸಮಾಜದ ಬ್ರಹ್ಮಪಾತವೋ, ಬೌದ್ಧ ಸಂಸ್ಕೃತಿಯ ಬ್ರಹ್ಮಪಾತವೋ ಯಶಪಾಲರು ಯಾರನ್ನೂ ಬಿಡುವುದಿಲ್ಲ. ಅವರು ಭೌತಿಕ ಸತ್ಯಗಳನ್ನು ಬಹು ಸೂಕ್ಷ್ಮತೆಯಿಂದ ಹಿಡಿದು ಬಿಡುತ್ತಾರೆ. ಹಾಗೂ ಮಾನವನ ಸಹಜ ಸ್ಥಿತಿಯ ಪ್ರಕ್ರಿಯೆಯಲ್ಲಿ ದೈಹಿಕ ಮನೋವಿಜ್ಞಾನವನ್ನು ಕಂಡು ಅದಕ್ಕೆ ಒತ್ತಾಸೆ ನೀಡುತ್ತಾರೆ. ಇವನ್ನು ಪವಿತ್ರತೆ ಹಾಗೂ ಅಪವಿತ್ರತೆಯ ತಕ್ಕಡಿಯಲ್ಲಿ ತೂಗಿ ನೋಡುವುದಿಲ್ಲ. 'ಕೋಕಲಾ ಡಕೈತ್' ಕಥೆಯಲ್ಲಿ ಕೋಕಲಾ ಬದುಕುವುದಕ್ಕಾಗಿ ಶರೀರವನ್ನು ಮಾರಿಕೊಳ್ಳುತ್ತಾಳೆ. ಆದರೂ ಅವಳಿಗೆ ಬಾಳ್ವೆ

ಸಾಧ್ಯವಾಗುವುದಿಲ್ಲ. ಜೀವನದ ಸೌಲಭ್ಯಗಳು ಸಿಗುವುದಿಲ್ಲ. ಆಗ ಅವಳು ಡಕಾಯಿತಳಾಗುತ್ತಾಳೆ. ಜನಗಳನ್ನು ಹೆದರಿಸಿ ಬೆದರಿಸಿದಾಗ ಅವಳಿಗೆ ಬೇಕಾದುದೆಲ್ಲಾ ಸಿಗುತ್ತದೆ. ಲೈಂಗಿಕತೆಯಾಗಲಿ, ದರೋಡೆ ಕೊಳ್ಳೆಗಳಾಗಲಿ ಇದಕ್ಕೆಲ್ಲ ಕಾರಣಗಳು ವರ್ಗಭೇದದ ಸಮಾಜದಲ್ಲಿವೆ ಎಂದು ಯಶಪಾಲರು ಹೇಳಬಯಸುತ್ತಾರೆ. ಈ ಎಲ್ಲ ಕಥೆಗಳು ತೀವ್ರಾಂತರ್ಯದಲ್ಲಿ ವರ್ಗಭೇದ ಉಳ್ಳ ಸಮಾಜದ ಅಸಮಾನತೆಗಳಿಂದ ಹುಟ್ಟಿ ಬಂದ ವಿಕೃತಿಗಳನ್ನು ಗೇಲಿ ಮಾಡುತ್ತವೆ.

ಯಶಪಾಲರ ಎಲ್ಲ ಕಥೆಗಳನ್ನು ಒಟ್ಟುಗೂಡಿಸಿ ನೋಡಿದಾಗ, ಅವರು ಕಥೆಯ ಪ್ಲಾಟುಗಳನ್ನು ಆಯ್ಕೆ ಮಾಡುವಾಗ ಅನೇಕ ಬಗೆಯ ಜೀವನ-ಸ್ಥಿತಿಗಳನ್ನು ಆರಿಸಿಕೊಂಡಿದ್ದಾರೆಂಬುದನ್ನು ಕಾಣುತ್ತೇವೆ. ಸ್ವತಂತ್ರ ಪೂರ್ವದ ಸಾಮಾಜಿಕ ವಿಸಂಗತಿಗಳು ಮತ್ತು ತದನಂತರದ 'ಚಾಲಾಕುತನ'ಗಳತ್ತ ಅವರ ದೃಷ್ಟಿ ಸದಾ ಹರಿದೇ ಇದೆ. ಜನ ವಿರೋಧಿ ಪ್ರವೃತ್ತಿಗಳನ್ನು ಹೆಕ್ಕಿಕೊಳ್ಳುವಲ್ಲಿ, ಸದಾ ಸಕ್ರಿಯರಾಗಿದ್ದು, ಅವುಗಳನ್ನು ವ್ಯಾಖ್ಯಾನಿಸಿ ಕಡೆಗೆ ಅವನ್ನೆಲ್ಲ ಪುಡಿ ಪುಡಿ ಮಾಡಲು ಯಥಾರ್ಥವಾದದ ಆಳತೆಗಳ ನೆರವನ್ನು ಬಳಸಿಕೊಳ್ಳುತ್ತಾರೆ. ಸುಳ್ಳು ಆದರ್ಶಗಳನ್ನು ಕಠೋರ ವ್ಯಂಗ್ಯದಿಂದ ಸದೆದಿದ್ದಾರೆ. ಮಾನವನು ಸಾಮಾಜಿಕ ಅಸಮಾನತೆಗಳ ಕಾರಣ ತುಳಿಯಲ್ಪಡುತ್ತಾನೆ; ಅದೂ ಈ ನೆಲದ ಮೇಲೆಯೇ. ಆದರೆ ಅವನಿಗೆ 'ಪರಲೋಕದ ನೆಲದ' ಸಮಾಧಾನ ನೀಡಲಾಗುತ್ತದೆ ಎಂಬುದು ಯಶಪಾಲರ ಅರಿವಿಗೆ ಸ್ಪಷ್ಟವಾಗಿತ್ತು. ಭಾಗ್ಯ ಮತ್ತು ಪರಲೋಕವಾದವು ಬಣ್ಣ ಬಣ್ಣದ ಆವರಣವನ್ನು ಹೊದ್ದುಕೊಂಡಿದೆ; ವ್ಯಕ್ತಿ ಇದನ್ನು ಶಾಶ್ವತ ಸ್ಥಿತಿ ಎಂದು ತಿಳಿದು ಸುಮ್ಮನಾಗಿದ್ದಾನೆ. ಜೊತೆಗೆ ಕಂಡರಿಯದ ಅಂಜಿಕೆಯ ಅಫೀಮನ್ನು ಅವನಿಗೆ ಉಣಿಸಲಾಗಿದೆ. ಹೀಗಾಗಿ ವಿಚಾರಕ್ಕೆ, ತರ್ಕಕ್ಕೆ ಇಲ್ಲಿ ಅವಕಾಶವಿಲ್ಲ-ತರ್ಕ ಮತ್ತು ನಂಬಿಕೆಗಳು ಬೇರೆ ಬೇರೆ. ಈ ರೀತಿಯಲ್ಲಿ ಲೇಖಕನ ಪಯಣ ಸಾಗಬೇಕು. ಇದೆಂತಹ ವಿಡಂಬನೆ! ಪ್ರಸಾದರ 'ಕಂಕಾಲ್' ಮತ್ತು ಪ್ರೇಮಚಂದರ ಕಾದಂಬರಿಗಳಲ್ಲಿ ಈ ವಿಡಂಬನೆಗಳಿವೆ. ಈ ಲೇಖಕರಿಗೆ ಸಂಘರ್ಷವೇರ್ಪಟ್ಟಿದ್ದು 'ಹೃದಯ ಪರಿವರ್ತನೆಯ' ಗಾಂಧೀವಾದದ ಬಲಹೀನ ಮಾನಕಗಳೊಡನೆ. ಹೀಗಾಗಿ ಯಶಪಾಲರ ಪಾಲಿಗೆ ಆ ಕಾಲದ ಸಾಹಿತ್ಯಕ ಸವಾಲುಗಳನ್ನು ಎದುರಿಸಿ ನಿಲ್ಲಬೇಕಾದ ಪ್ರಸಂಗ ಏರ್ಪಟ್ಟಿತ್ತು. ಈ ಎಲ್ಲ ಸವಾಲುಗಳು ಜೈನೇಂದ್ರ, ಅಜ್ಞೇಯ, ಇಲಾಚಂದ್ರ ಜೋಶಿ ಮೊದಲಾದವರ ಸಾಹಿತ್ಯದ ಮೂಲಕ ಇವರ ಮುಂದೆ ನಿಂತಿದ್ದವು. ಯಶಪಾಲರು ತಮ್ಮ ಬರಹ ಮತ್ತು ಪ್ರಗತಿಶೀಲ ಆಂದೋಳನ ಎರಡನ್ನೂ ವ್ಯಾಪಕವಾದ ಸಾಮಾಜಿಕ ಜೀವನದೊಳಕ್ಕೆ ತಂದರು. ಅವರು ಒಂದೆಡೆ ಬರೆಯುತ್ತಾರೆ 'ಪ್ರಗತಿವಾದವು ವ್ಯಾಪಕವಾದ ಸಾಮಾಜಿಕ ಸಮಸ್ಯೆಗಳ ಕ್ಷೇತ್ರದಲ್ಲಿ ಹಿಂದಿನ ಶೋಷಕ ವ್ಯವಸ್ಥೆಯ ಹಿಡಿತದಿಂದ ಸಮಾಜಕ್ಕೆ ಬಿಡುಗಡೆ ನೀಡುವ ಪ್ರಯತ್ನದಲ್ಲಿ ನೆರವಾಗಲು

ಬಯಸಿದರೆ, ಸಾಹಿತ್ಯವು ತರ್ಕಸಂಗತವಾದ ಸ್ವಾತಂತ್ರ್ಯವನ್ನು ಹೊಂದಿ ಶೋಷಕ ವ್ಯವಸ್ಥೆಯ ಮೇಲೆ ಏರಿ ಹೋಗುವ ಸ್ಥಿತಿಯನ್ನುಂಟು ಮಾಡಬೇಕು. ಇದರಿಂದಲೇ ಹೊಸ ಸಮಾಜ ಒಂದರ ಸೃಷ್ಟಿಯಲ್ಲಿ ಉತ್ಸಾಹ ಒದಮೂಡುವುದು ಸಾಧ್ಯ" (ಧರ್ಮಯುದ್ಧ: ಪೀಠಿಕೆ-ಪುಟ ೬).

ತನ್ನದಾದ ಆರ್ಥಿಕ ನಿಯಂತ್ರಣದ ಕಾರಣ ಶೋಷಣೆ ವ್ಯವಸ್ಥೆ ನೆಲೆ ಊರಿಕೊಂಡಿದೆ. ಶೋಷಕರು ಶೋಷಿತರು ಈ ವರ್ಗಗಳ ನಡುವಿನ ಸಾಮಾಜಿಕ ಸಂಬಂಧಗಳ ಪರಂಪರೆ ಈ ಆರ್ಥಿಕ ನಿಯಂತ್ರಣಗಳಿಂದ ಬೆಳೆಯುತ್ತದೆ, ಅಳಿಯುತ್ತದೆ. ಧರ್ಮ-ಸಂಪ್ರದಾಯಗಳು, ಸಂಸ್ಕಾರ ಮತ್ತು ಸಂಸ್ಕೃತಿಗಳು ಇಲ್ಲಿಂದಲೇ ಸಂಚಾಲನೆ ಪಡೆಯುತ್ತವೆ. ಯಶಪಾಲರು ಸಾಮಾಜಿಕ ಸಮಗ್ರತೆಯ ಈ ಸಿದ್ಧಾಂತವನ್ನು ಅರಿತವರಾಗಿದ್ದರು. ಇವೆಲ್ಲದರ ಅಭಿವ್ಯಕ್ತಿ ಅವರ ಐವತ್ತಕ್ಕೂ ಮಿಕ್ಕಿದ ಕಥೆಗಳಲ್ಲಿ ಕಂಡು ಬಂದಿದೆ. 'ಹಿಂಸಾ', 'ಸಂನ್ಯಾಸೀ', 'ನಯೀ ದುನಿಯಾ', 'ವೋ ದುನಿಯಾ', 'ಭಸ್ಮಾವೃತ ಚಿನಗಾರಿ', 'ಗವಾಹೀ', 'ಭಾಗ್ಯಚಕ್ರ', 'ಸತ್ಯ ಕಾ ಮೂಲ್ಯ', 'ಶಹಾದತ್(ಹುತಾತ್ಮತೆ)', 'ಫೋಲೋ ಕಾ ಕುರ್ತಾ', 'ಭವಾನೀ ಮಾತಾ ಕೀ ಜಯ್', 'ಉತ್ತರಾಧಿಕಾರಿ', 'ಕುಲ್ ಮರ್ಯಾದಾ', 'ಓ ಭೈರವೀ', 'ದಾನ್ ಧರ್ಮ್', 'ಮಕ್ಖೀ ಯಾ ಮಕಡೀ' (ನೊಣ ಅಥವಾ ಜೇಡ), 'ಖಚ್ಚರ್ ಔರ್ ಆದಮೀ', 'ಭೂಖ್ ಕೆ ತೀನ್ ದಿನ್', 'ಕರ್ಮಫಲ್', 'ಫೂಲ್ ಕೀ ಚೋರೀ', 'ಕಾಲಾ ಆದಮೀ', 'ಆದಮೀ ಯಾ ಪೈಸಾ' ಇವೆಲ್ಲಾ ಉದಾಹರಣೆಗಳು.

'ಅಹಿಂಸಾ ಪರಮೋ ಧರ್ಮ' -ಎಂಬುದು ಗಾಂಧೀಜಿಯ ಮೂಲಮಂತ್ರವಾಗಿತ್ತು. ಸಮಾಜ ಸೇವಕರಿಗೆ ವ್ಯಾವಹಾರಿಕ ಜೀವನದಲ್ಲಿ ಈ ಸೂತ್ರ-ನೂಲುವುದು, ಭಜನೆ ಅಥವಾ ಪ್ರಾರ್ಥನೆಯಲ್ಲಿ ಭಾಗವಹಿಸುವಂತೆಯೇ ಒಂದು ರೀತಿಯ ನಾಟಕವಾಗಿತ್ತು. 'ಹಿಂಸಾ' ಎಂಬ ಕಥೆಯಲ್ಲಿ ಯಶಪಾಲರು ಈ ನಾಟಕವನ್ನು ಥಳಿಸಿದ್ದಾರೆ. 'ಸಂನ್ಯಾಸೀ' ಎಂಬ ಕಥೆಯಲ್ಲಿ ನರೇಂದ್ರನಂತಹ ಕಲ್ಪನಾಶೀಲ ಯುವಕ ವಿವಾದಗಳ ನಂತರ ಪರಿಸ್ಥಿತಿಗಳ ಒತ್ತಡಕ್ಕೆ ಸಿಕ್ಕಿ ಕುಗ್ಗಿ ಸಾಧು ಆಗಿ ಬಿಡುತ್ತಾನೆ. ಹೆಚ್ಚುತ್ತಿರುವ ಮಕ್ಕಳ ಸಂಖ್ಯೆ, ಬೆಲೆ ಏರಿಕೆ, ಸಾಹುಕಾರನ ಬಾಕಿ, ಬಡ್ಡಿಯ ಉಪಟಳ ಮತ್ತು ಕಡಿಮೆ ಸಂಬಳ ಇವೆಲ್ಲ ಅವನನ್ನು ಮಣಿಸಿ ಬಿಡುತ್ತವೆ. ಕಡೆಗೆ ಭಿಕ್ಷೆ ಬೇಡುವುದೇ ಎಲ್ಲಕ್ಕಿಂತ ಸುಗಮವಾದುದೆನಿಸುತ್ತದೆ. 'ವೋ ದುನಿಯಾ' ಅಂದರೆ ಸ್ವರ್ಗ-ಸ್ವರ್ಗದ ಲೋಭ ಅಂದರೆ ಈ ಜಗತ್ತನ್ನು ತಿರಸ್ಕರಿಸುವುದು-ಆಧ್ಯಾತ್ಮದ ಮಾಧ್ಯಮದ ಮೂಲಕ ಶೋಷಕರ ಹಿತವನ್ನು ಸಾಧಿಸಬಲ್ಲ ಉಪಕರಣ ಎಂದು.

'ಮಹಾದಾನ್' ಕಥೆಯಲ್ಲಿ ವರ್ತಕನೊಬ್ಬ ಸಾವಿರಾರು ಚೀಲ ಅಕ್ಕಿಯನ್ನು ದಾಸ್ತಾನು ಮಾಡುತ್ತಾನೆ. ದುರ್ಭಿಕ್ಷಕ್ಕಾಗಿ ಕಾಯುತ್ತಾನೆ. ಕ್ಷಾಮ ಬಂದಾಗ ಬಹಳ

ಚಾತುರ್ಯದಿಂದ ದಾಸ್ತಾನನ್ನು ಕಾದುಕೊಳ್ಳುತ್ತಾ ಬೆಲೆ ಏರಿಸುತ್ತಾ ಅಕ್ಕಿ ಮಾರುತ್ತಾನೆ. ತನ್ನ ಮುನೀಮರಿಗೆ ತಾಕೀತು ಮಾಡುತ್ತಿರುತ್ತಾನೆ. ಬಡವರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದಿನೇ ದಿನೇ ಸಾವನ್ನಪ್ಪುತ್ತಾರೆ. ವರ್ತಕ ಧಾರ್ಮಿಕನಾಗಿ ಶವ ದಹನಕ್ಕೆ ಬಿಟ್ಟಿಯಾಗಿ ಸೌದೆ ಒದಗಿಸುತ್ತಾನೆ. ಹಸಿವಿನಿಂದ ತೊಳಲುವ ಜನಗಳಿಗೆ ಒಂದು ಹಿಡಿ ಕಡಲೆ ಕೊಡುತ್ತಾನೆ. ನೀರಿನ ಸಲೀಂದ್ರಗಳನ್ನಿಡಿಸುತ್ತಾನೆ. ವರ್ತಕನ ಈ ಮಹಾದಾನದ ಸುದ್ದಿ ಪತ್ರಿಕೆಗಳಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಅಚ್ಚಾಗುತ್ತದೆ. ದುರ್ಭಿಕ್ಷ ಮತ್ತು ಜನಗಳ ಸಾವಿಗೆ ಕಾರಣನಾದವನು ಈ ವರ್ತಕನೇ. ಆದರೆ ಅವನ ಸಾಮಾಜಿಕ 'ಆಕೃತಿ' (ಛವಿ) ಮಾತ್ರ ಮಹಾದಾನಿಯದು. 'ವೈಷ್ಣವೀ' ಎಂಬ ಕಥೆಯಲ್ಲಿ ಸಮಾಜದ ದೌರ್ಜನ್ಯಗಳಿಗೆ ಬಲಿಯಾದ ನಿಸ್ಸಹಾಯ ಹೆಣ್ಣು ದ್ರೌಪದಿ ಕೊರಳಲ್ಲಿ ತುಲಸೀಮಾಲಿ ಧರಿಸಿ ಹಣೆ ಮತ್ತು ಕೊರಳಿಗೆ ಚಂದನ ಲೇಪಿಸಿಕೊಂಡು ವೈಷ್ಣವಿ ಆಗುತ್ತಾಳೆ. ಅವಳು ಆಶ್ರಯಕ್ಕಾಗಿ ಹಾತೊರೆದವಳು. ಆದರೆ ಸಮಾಜ ಅವಳಿಗೆ ಆಸರೆ ನೀಡಲಿಲ್ಲ. ಕಡೆಗೆ ಅವಳು ಸಮಾಜಕ್ಕೆ ಸವಾಲೆಸೆಯುತ್ತಾಳೆ ಮತ್ತು ಆಸರೆಯನ್ನು ಹುಡುಕಿಕೊಳ್ಳುತ್ತಾಳೆ.

"ಫೂಲೋ ಕಾ ಕುರ್ತಾ" -ಇದರಲ್ಲಿ ಐದು ವರ್ಷದ ಬಾಲೆ ಫೂಲೋ ಏಳು ವರ್ಷದ ಗಂಡ ಸತ್ತೂವನ್ನು ಕಂಡು ಷರಟಿನ ಮುಂಭಾಗವನ್ನೆತ್ತಿ ಮುಖ ಮುಚ್ಚಿಕೊಳ್ಳುತ್ತಾಳೆ. ಸಮಾಜ ಅವಳಿಗೆ ನೀಡಿರುವ ನಾಚಿಕೆ ಎಂಬ ಸಂಪ್ರದಾಯದ ಫಲವಾಗಿ ಯಶಪಾಲ್ ಅನ್ನುತ್ತಾರೆ "ಷರಟಿನ ಮುಂಭಾಗವನ್ನೆತ್ತಿ ಮುಖ ಮುಚ್ಚಿಕೊಳ್ಳಲು ಹವಣಿಸುವ ಫೂಲೋಳನ್ನು ಕಂಡು ನಾವು ಬತ್ತಲೆಯಾಗುತ್ತೇವೆ. ಹೊಸ ಲೇಖಕರು ನಮ್ಮ ಮುಖದ ಆವರಣವಾಗಿರುವ ಷರಟಿನ ಮುಂಭಾಗವನ್ನು ಕೆಳಕ್ಕಿಳಿಸುತ್ತಿದ್ದಾರೆ." ಷರಟನ್ನುಕೆಳಕ್ಕಿಳಿಸುವುದೆಂದರೆ ? ಗೌರವ ಹಾಗೂ ನಾಚಿಕೆಗಳನ್ನು 'ನಕಲಿ'ಯಾಗಿಸಬೇಡಿ ಎಂದು.

'ಕುಲ ಮರ್ಯದೆ' ಒಂದು ಬ್ರಾಹ್ಮಣ ಪರಿವಾರದ ಮೂರ್ಖತೆಯ ಕಥೆ. ಇಲ್ಲಿ ಎಲ್ಲ ಮರ್ಯಾದೆಗಳನ್ನು ಕಾಪಾಡಿಕೊಂಡು ಬರುವ ಹೊಣೆ ಹೆಣ್ಣಿಗೆ ಸೇರಿದ್ದು. ಗಂಗಾಧರ ಒಬ್ಬ ಕಾಂಗ್ರೆಸ್ ಧುರೀಣ. ಹೆಂಡತಿಯೂ ಸಮಾಜಸೇವೆಯಲ್ಲಿ ಭಾಗಿಯಾಗಲೆಂದು ಬಯಸುತ್ತಾನೆ. ಅವಳ ಮುಖವನ್ನು ಮುಚ್ಚಿರುವ ಮುಸುಕನ್ನು ಕಳಚಲು ಇಚ್ಛಿಸುತ್ತಾನೆ. ಆದರೆ ಅವನ ತಂದೆ ತಾಯಿ ಸೊಸೆಯನ್ನು ಕರೆದುಕೊಂಡು ಹಳ್ಳಿಗೆ ಹೊರಟು ಹೋಗುತ್ತಾರೆ. ಮನೆಯ ನಾಲ್ಕು ಗೋಡೆಗಳ ಆವರಣದೊಳಗೆ ಸೊಸೆಯ ಮುಖಕ್ಕೆ ಮುಸುಕೆಳೆದು ತಮ್ಮ ಕುಲ ಗೌರವಗಳನ್ನು ಕಾಪಾಡಿಕೊಳ್ಳುತ್ತಾರೆ (ಉತ್ತರಾಧಿಕಾರೀ, ಪುಟ-೧೦೨).

'ಉತ್ತರಾಧಿಕಾರೀ' ಕಥೆ ಸಾಮಂತ ವರ್ಗದ ಸಂಬಂಧಗಳಲ್ಲಿ ಪುಂಸತ್ವವಿಲ್ಲದವನ ಸಂತಾನಾಪೇಕ್ಷೆಯ ಕಥೆ. ಸಂಪತ್ತಿಗೆ ವಾರಸುದಾರ ಬೇಕಲ್ಲ,

ಅವನನ್ನು 'ಮಗ' ಎಂದರಾಯಿತು. ಈ ಇಚ್ಛೆಯನ್ನು ಪೂರೈಸಿಕೊಳ್ಳುವ ಸಲುವಾಗಿ ಧರ್ಮ, ಭಾಗ್ಯ, ಪಂಚಾಯತಿ, ಸಂಪ್ರದಾಯ, ಎಲ್ಲ ತಂತ್ರಗಳನ್ನು ಹೂಡಲಾಗುತ್ತದೆ. ಸಾಮಾನ್ಯ ಜನರ ಪಾಲಿಗೆ ಬರೇ ಕೃತಕ ತೃಪ್ತಿ ನೀಡುವ, ಆದರೆ ಶೋಷಕರ ಎಲ್ಲ ವಿಧವಾದ ಅನಾಚಾರಗಳಿಗೆ ಸ್ವಾತಂತ್ರ್ಯ ನೀಡುವ ಭಗವಂತನನ್ನು ಕಟಕಟೆಯಲ್ಲಿ ನಿಲ್ಲಿಸುತ್ತಾರೆ ಯಶಪಾಲ್ ಅವರು.

'ಓ ಭೈರವೀ' ಕಥಾ ಸಂಕಲನದ ಪೀಠಿಕೆಯಲ್ಲಿ ಅವರು ಬರೆಯುತ್ತಾರೆ "ಸಾಲ ತೀರಿಸಲು ತನ್ನ ಪತ್ನಿಯನ್ನೇ ಪೇಟೆಯಲ್ಲಿ ಮಾರಿಕೊಂಡ ರಾಜಾ ಹರಿಶ್ಚಂದ್ರನ ಕರ್ತವ್ಯ ಪರಾಯಣತೆಯಲ್ಲಿ ನನಗೆ ಗೌರವ ಭಾವದ ಅನುಭವ ಆಗುವುದೇ ಇಲ್ಲ. ನಾನು ಇದನ್ನು ಧರ್ಮ ಎನ್ನುವುದಿಲ್ಲ" (ಪುಟ ೭).

'ಓ ಭೈರವೀ' ಅಲ್ಲದೆ 'ದೇವೀ ಕೀ ಲೀಲಾ' 'ಸಾಮಂತೀ ಕೃಪಾ', 'ಗೌಮಾತಾ', 'ಮಹಾರಾಜ್ ಕಾ ಇಲಾಜ್', 'ಭಗವಾನ್ ಕಾ ಖೇಲ್', 'ಚೌರಾಸೀ ಲಾಖ್ ಯೋನಿ' (೮೪ ಲಕ್ಷ ಯೋನಿಗಳು), 'ಖುದಾಕಾ ಖೌಫ್' (ದೇವರ ಭಯ), 'ಖುದಾ ಖುದಾಕೀ ಲಡಾಯೀ', 'ಭಗವಾನ್ ಕೇ ಪಿತಾ ಕೇ ದರ್ಶನ್' ಇವೇ ಮೊದಲಾದ ಅನೇಕ ಕಥೆಗಳಲ್ಲಿ ಸಾಮಂತೀ ಮೌಲ್ಯಗಳಿಗಾಗಿ ಶೋಷಕರ ಹಿತ ದೃಷ್ಟಿಯಿಂದ ಭಗವಂತನನ್ನು ಬಳಸಿಕೊಂಡಿರುವ ಪ್ರಸಂಗಗಳಿವೆ. ಯಶಪಾಲರ ಇನ್ನೊಂದು ಕಥೆ: ಇದೇ ನಿಮಿತ್ತವಾಗಿ ಬರೆದದ್ದು. 'ಭಗವಾನ್ ಕಿಸ್ ಕೇ ಭೀ ಹೈಂ'. ಸಾಮಂತೀ ಮೌಲ್ಯಗಳೆಂದರೇನು ? -ರಾಜಾ ಮತ್ತು ದಾಸನ ಕರ್ತವ್ಯಗಳು ಬೇರೆ ಬೇರೆ, ಆದರೆ ಇದನ್ನು ನಿಶ್ಚಯಿಸಿದ್ದು ರಾಜನೇ. 'ದಾಸ ಧರ್ಮ' ಕಥೆಯಲ್ಲಿ ರಾಜಾ ಸಾತವಾಹನನ ಭೋಗದವಳು ದಾಸಿ ದೀಮಾ ಯಾವುದೋ ತಪ್ಪು ಕಲ್ಪನೆಯಿಂದಲೋ ಇಲ್ಲ ಸಹಜೇಚ್ಛೆಯಿಂದಲೋ ದಾಸ ಅಂದ್ರೇಕಸನನ್ನು ಕೂಡುತ್ತಾಳೆ. ಈ ಅಪರಾಧಕ್ಕೆ ಶಿಕ್ಷೆ, ಇಬ್ಬರನ್ನು ಆನೆಯಿಂದ ತುಳಿಸಿ ಕೊಲ್ಲಿಸಲಾಗುತ್ತದೆ. ಯಶಪಾಲರು ಕಾಂಗ್ರೆಸ್ಸಿಗರ ದೈವಭಕ್ತಿಯನ್ನು ಕಂಡು ಸಿಟ್ಟಾಗುತ್ತಿದ್ದರು. ಏಕೆಂದರೆ ಸಾಮಂತೀ ಪದ್ಧತಿಯು ದೇವರನ್ನು ಶ್ರೀಮಂತರ ಪಕ್ಷಕ್ಕೆ ಸೇರಿಸಿ ಬಿಟ್ಟಿದೆ. ಅವರು ಬರೆಯುತ್ತಾರೆ, "ಕಾಂಗ್ರೆಸ್ ಆಂದೋಲನದಲ್ಲಿ ಸಹಕರಿಸುವುದರಿಂದ ದೇವರನ್ನು ನಂಬುವುದು ಎಂದು ಅರ್ಥ ಮಾಡುವುದಾದರೆ, ಜನರನ್ನು ಮೂರ್ಖರಾಗಿಸುವುದಕ್ಕೆ ಯಾವುದೇ ಮಿತಿ ಇಲ್ಲದಂತಾದೀತು" (ದೇಶದ್ರೋಹೀ, ಪುಟ-೧೦೫).

ಯಶಪಾಲರು ಬಂಡವಾಳಶಾಹಿ ಮೌಲ್ಯಗಳಲ್ಲಿನ ಒಳತೋಟಗಳನ್ನು (ಅಂತರ್ವಿರೋಧಗಳನ್ನು) ತಮ್ಮ ಕಥೆಗಳಲ್ಲಿ ಎತ್ತಿ ತೋರಿಸುತ್ತಾರೆ ಹಾಗೂ ಅವುಗಳಲ್ಲಿ ವರ್ಗ ಸಂಘರ್ಷ ಸ್ಥಿತಿಗಳನ್ನು ಹುಡುಕುತ್ತಾರೆ. ಇದಕ್ಕೆ ಅವರ 'ನಯೀ ದುನಿಯಾ' ಉದಾಹರಣೆಯಾಗಿದೆ. ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರ ನಿಜವಾದ ಕೂಲಿ ಎಷ್ಟೆಂಬುದನ್ನು ಮುಚ್ಚಿಟ್ಟು ಅವರನ್ನು ಹತ್ತಿಕ್ಕಲು

ಎಂತೆಂತಹ ಪಿತೂರಿಗಳೂ, ದೌರ್ಜನ್ಯಗಳೂ ನಡೆಯುತ್ತವೆ ಎಂಬುದನ್ನು ಈ ಕಥೆಯಲ್ಲಿ ತೋರಿಸಿದ್ದಾರೆ. ಮೇನೇಜರ್ ಸರೀನ್ ಕಾರ್ಮಿಕರ ಮುಂದಾಳು ಮಾಥುರ್ ಅನ್ನು ಕೊಳ್ಳಲು ಎಲ್ಲ ರೀತಿಯ ಆಮಿಷಗಳನ್ನೊಡ್ಡುತ್ತಾನೆ. ಅವನ ಮೇಲೆ ಪ್ರಭಾವ ಬೀರಲು ತನ್ನ ಹೆಂಡತಿಯನ್ನೂ ಬಳಸಿಕೊಳ್ಳುತ್ತಾನೆ. ಕಡೆಗೆ ಅವನನ್ನು ಲಾರಿಯ ಕೆಳಗೆ ಸಿಕ್ಕಿಸಿ ಕೊಲ್ಲಿಸುತ್ತಾನೆ. ಮಾಥುರ್ ಹೊಸ ಸಮಾಜವಾದಿ ವ್ಯವಸ್ಥೆಯ ಕನಸು ಕಾಣುತ್ತಾನೆ. ಶ್ರೀಮತಿ ಸರೀನಳಲ್ಲಿ ದುರ್ಬಲವಾದ ಮಾನವೀಯ ಸಂವೇದನೆ ಇದ್ದು ಅದು ಮಾಥುರ್ ಕಡೆ ವಾಲುತ್ತದೆ. ಸರೀನ ಯಾವ ಮಟ್ಟಿಗೆ ಅಮಾನವೀಯನಾಗುತ್ತಾನೆ ಎಂದರೆ, ತನ್ನ ಹೆಂಡತಿ ಮತ್ತು ಮಗಳನ್ನೂ ಈ ವ್ಯವಸ್ಥೆಯ ರಕ್ಷಣೆಗೆ ಉಪಕರಣವಾಗಿ ಬಳಸಿಕೊಳ್ಳುತ್ತಾನೆ. ಕಥೆಯಲ್ಲಿ ಸಂಘಟಿತರಾದ ಕಾರ್ಮಿಕರು, ಸರೀನನನ್ನು ಕೊಂದು, ತಮ್ಮ ನಾಯಕನ ಕೊಲೆಯ ಸೇಡನ್ನು ತೀರಿಸಿಕೊಳ್ಳುತ್ತಾರೆ. ಗುರಿ ಸಾಧಿಸಲೆಂದು ಒಂದೆರಡು ಕೊಲೆಗಳನ್ನು ಮಾಡಿ ಕೂಲಿಕಾರರ ಮೇಲೆ ಭಯದ ವಾತಾವರಣವನ್ನು ಹೇರಿದ ಮಾತ್ರಕ್ಕೆ 'ಮಜದೂರ್ ಜಿಂದಾಬಾದ್' ಎಂಬ ಉಬ್ಬರ ಇಳಿದು ಹೋಗುವುದಿಲ್ಲ ಎಂಬ ನಂಬಿಕೆಗೆ ಲೇಖಕರು ಗಟ್ಟಿತನ ನೀಡಿದ್ದಾರೆ. ಇಲ್ಲಿ ಹೊಸ ಜಗತ್ತನ್ನು ಸೃಷ್ಟಿಸಬೇಕೆಂಬ ಸಂಕಲ್ಪವಿದೆ. ಇಂತಹುದೇ ಇನ್ನೊಂದು ಕಥೆ 'ಭವಾನೀ ಮಾತಾ ಕೀ ಜಯ್'. ಇದರಲ್ಲಿ ಮಿಲ್ಲಿನ ಒಡೆಯ, ಅವರ ಸ್ವಾಮಿ ಭಕ್ತ ಜವಾ[illegible], ಜಮಾದರನ ಅಳಿಯ ಭೂರೇ ಮತ್ತು ಮಗಳು ಭವಾನಿಯ ಕಥೆಯೊಡನೆ ಸಂಘಟಿತ ಕಾರ್ಮಿಕರ ಕಥೆಯೂ ಇದೆ. ಕಾರ್ಮಿಕರು ತಮ್ಮ ಅಧಿಕಾರಗಳ ಸಲುವಾಗಿ ಹೋರಾಟ ನಡೆಸಿದ್ದಾರೆ. ಸ್ವಾಮಿ ಭಕ್ತ ಜಮಾದಾರನು ತನ್ನ ಅಳಿಯ ಕಾರ್ಮಿಕರನ್ನು ಹೋರಾಟದಲ್ಲಿ ಕೂಡಿಕೊಳ್ಳಬಾರದೆಂದು ಬಯಸುತ್ತಾನೆ. ಹೀಗಾಗಿ ಮಗಳನ್ನು ಅಳಿಯನೊಡನೆ ಕಳುಹಿಸಿಕೊಡದೆ ತನ್ನ ಮನೆಯಲ್ಲೇ ಇಟ್ಟುಕೊಳ್ಳುತ್ತಾನೆ. ಆದರೆ ಅಳಿಯನಿಗೆ ಇದು ಒಪ್ಪಿತವಲ್ಲ. ಕಡೆಗೆ ಮಗಳಿಗೂ ವರ್ಗ ಪರಿಜ್ಞಾನ ಮೂಡುತ್ತದೆ. ಅವಳು ಕಾರ್ಮಿಕರ ಪರವಾಗುತ್ತಾಳೆ. ಭವಾನಿಗೆ ಮಿಲ್ಲಿನ ಮಾಲಿಕ ಹಾರಿಸಿದ ಗುಂಡು ತಗಲಿ ಅವಳು ಸಾಯುತ್ತಾಳೆ. ಜಮಾದಾರ ಮಿತಾನ್‌ಸಿಂಹ ಈಗ ಕಾರ್ಮಿಕರನ್ನು ಕೂಡಿಕೊಳ್ಳುತ್ತಾನೆ. ಕಥೆಯಲ್ಲಿ ಲೇಖಕರು ಕಾರ್ಮಿಕರ ಪರವಾಗಿ ಉಪದೇಶಗಳ ಮಳೆ ಸುರಿಸಿದ್ದಾರೆ. ವರ್ಗಸಂಘರ್ಷ ಕಡೆಗೆ ವರ್ಗದ್ವೇ ಆಗುತ್ತದೆ ಎಂಬ ಮಾತನ್ನು ಹೇಳಿದ್ದಾರೆ.

ಯಶಪಾಲರು ಶೋಷಿತರ ಮತ್ತು ಅವರ ಅಪಾರ ಶಕ್ತಿಯನ್ನು ಆಮೂಲ ಹಿಡಿದುಬಿಡುತ್ತಾರೆ. ಶೋಷಿತರ ನಿಜವಾದ ಶಕ್ತಿ ಇದೇ. ಇದರಿಂದಲೇ ಅವರು ಕಷ್ಟಗಳಿಗೆ ಸಿಕ್ಕಿಹಾಕಿಕೊಳ್ಳುತ್ತಾರೆ ಹಾಗೂ ಸೋತಾಗಲೂ ಜೀವಂತ ಉಳಿದುಕೊಳ್ಳುತ್ತಾರೆ ಎಂದು ಯಶಪಾಲರು ಅಭಿಪ್ರಾಯಪಡುತ್ತಾರೆ. ಈ ಜನ

ತಮ್ಮ ಮೂಲ[illegible] ಗುರ್ತಿಸಿ ಕೊಳ್ಳಲಾರದವರಾಗಿರುವುದೇ ಇಂದಿನ ವಿಡಂಬನೆ. ಈಗ ಅವನ್ನು ಅವರಿಗೆ ಪರಿಚಯಿಸಿ ಕೊಡುವುದರ ಜೊತೆಗೆ ಅವರಿಗೆ ಅದರ ದರ್ಶನ ಮಾಡಿಸಬೇಕು. ಜನರು [illegible] ತಂತ್ರಗಳ ಬಲೆಯಲ್ಲಿ ಸಿಕ್ಕಿಕೊಂಡಿದ್ದಾರೆ. ಲೇಖಕರು ಅವರನ್ನು ಅದರಿಂದ ಪಾರು ಮಾಡಬಯಸುತ್ತಾರೆ. 'ಮಕ್ಖೀ ಯಾ ಮಕಡೀ' ಎಂಬ ಕಥೆಯ ಆರಂಭದ ವಾಕ್ಯ ಹೀಗಿದೆ "ಒಳ್ಳೆಯ ಜನರು ಈ ಬಲೆಗೆ ಸಿಕ್ಕಿಕೊಂಡು ಅಸಹಾಯ ನೊಣಗಳಂತೆ ಒದ್ದಾಡಿ ಕಡೆ ಉಸಿರೆಳೆಯುತ್ತಿರುತ್ತಾರೆ" (ಖಚ್ಚರ್ ಔರ್ ಆದಮೀ, ಪುಟ-೨೦).

'ಭೂಖ್ ಕೇ ತೀನ್ ದಿನ್' ಕಥೆಯಲ್ಲಿ ನಿರುದ್ಯೋಗಿ ನಂದನ ಮೂರು ದಿನಗಳಿಂದ ಅನ್ನವಿಲ್ಲದಿದ್ದಾನೆ. ಅವನಿಗೆ ಎಲ್ಲೂ ಕೆಲಸ ಸಿಗುವುದಿಲ್ಲ. ಅರ್ಹತೆ ಮತ್ತು ಸ್ವಾಭಿಮಾನಕ್ಕೆ ಎಲ್ಲೂ ಬೆಲೆ ಇಲ್ಲ. ಸರ್ಕಾರ ತನ್ನನ್ನು ಕೈದು ಮಾಡಲಿ ಎಂದು ಬಯಸುತ್ತಾನೆ. ಏಕೆಂದರೆ ಅಲ್ಲಿ ಊಟ ಸಿಗುತ್ತದೆ. ಆದರೆ ಒಬ್ಬ ಪೊಲೀಸ್ ಅಧಿಕಾರಿಯ ಸಹಾನುಭೂತಿಯಿಂದ ಅವನು ಸೋಲುತ್ತಾನೆ. ಹೀಗೆ "ಅವನು ಸೋಲುವುದು ಕಾನೂನಿಗಲ್ಲ, ಸೌಜನ್ಯಕ್ಕೆ." ಪರಿಸ್ಥಿತಿಗಳನ್ನು ನಿರ್ವಹಿಸಿಕೊಳ್ಳಬೇಕಾಗಿರುವುದರಿಂದ ಈ ಕಥೆ ಒಂದಿಷ್ಟು ಆದರ್ಶವಾದಿಯಾಗಿದೆ ಎಂಬುದು ನಿಜ. ಆದರೆ ನಿರುದ್ಯೋಗಿ ಮನುಷ್ಯನ ಮಾನಸಿಕತೆಯ ಚಿತ್ರಣ ಬಹು ಪ್ರಾಮಾಣಿಕವಾಗಿ ಮೂಡಿ ಬಂದಿದೆ. ವ್ಯಕ್ತಿ ತನ್ನ ಸಂಸ್ಕಾರಗಳ ಸಂಕೋಲೆಗೆ ಸಿಕ್ಕಿ ಒಳಗೊಳಗೇ ಕೊರಗಿ ಸಾಯುತ್ತಾನೆ ಎನ್ನುವುದನ್ನು ಯಶಪಾಲರು ಕಂಡುಕೊಳ್ಳುತ್ತಾರೆ. ಸಿಮ್ಲಾದ ಹಿಮಪಾತದಲ್ಲಿ ಹೇಸರುಗತ್ತೆ ಬದುಕಿಕೊಳ್ಳುತ್ತದೆ; ಅದೇ ತಥಾಕಥಿತ ವೈಷ್ಣವರು ಉಳಿಯುವುದಿಲ್ಲ. ಇದನ್ನು ಯಶಪಾಲರು 'ಖಚ್ಚರ್ ಔರ್ ಆದಮೀ' ಎಂಬ ಕಥೆಯಲ್ಲಿ ತೋರಿಸಿದ್ದಾರೆ. ಅವರು ಬಟ್ಟೆ ಬದಲಿಸಿಕೊಳ್ಳಲಿಲ್ಲ (ಅಂದರೆ ಅಗತ್ಯವಾದ ಉಣ್ಣೆ ಬಟ್ಟೆಗಳನ್ನು ಧರಿಸಿಕೊಳ್ಳಲಿಲ್ಲ) ಮತ್ತು ಬ್ರಾಂಡಿ ಕುಡಿದು ದೇಹದ ಉಷ್ಣತೆಯನ್ನು ಕಾಪಾಡಿಕೊಳ್ಳಲಿಲ್ಲ. ಹೇಸರುಗತ್ತೆ ಸ್ಥಿತಿಯನ್ನರಿತುಕೊಂಡು ಆತ್ಮರಕ್ಷಣೆ ಮಾಡಿಕೊಂಡಿತು. ಆದರೆ ಸಂಸ್ಕಾರಗಳಿಗೆ ಅಂಟಿಕೊಂಡ ಮಾನವ ಸ್ಥಿತಿಗನುಗುಣವಾಗಿ ನಡೆದುಕೊಳ್ಳಲಾರದೆ ಹೋದ. ಇದು ಯಶಪಾಲರ ತೀರ್ಮಾನ (ಖಚ್ಚರ್ ಔರ್ ಆದಮೀ, ಪುಟ-೧೦೪). ಪರಿಸ್ಥಿತಿಗನುಗುಣವಾಗಿ ನಡೆದುಕೊಳ್ಳುವಂತೆ ಮಾಡಲೆಂದೇ ಯಶಪಾಲರ ರಚನಾತ್ಮಕ ಹೋರಾಟ. ಲೇಖಕನಾದವನು ತನ್ನ ಕೃತಿಗಳ ಮೂಲಕ ಈ ಕೆಲಸ ಮಾಡಬೇಕು, ಲೇಖನ ಕಲೆಯನ್ನು ಒಂದು ವೃತ್ತಿಯಾಗಿ ಬಳಸಿಕೊಳ್ಳಬಾರದೆಂಬುದೇ ಅವರ ಅಪೇಕ್ಷೆ.

'ಭಸ್ಮಾವೃತ ಚಿನಗಾರಿ' (ಬೂದಿ ಮುಚ್ಚಿದ ಕಿಡಿ) ಎಂಬ ಸಂಕಲನದಲ್ಲಿ ಅವರು ಬರೆದರು, "ಎಲ್ಲ ಸ್ಥಿತಿಗಳಲ್ಲೂ ಮಾನವನಲ್ಲಿನ ನೈತಿಕತೆ ಮತ್ತು ಕರ್ತವ್ಯದ ಪ್ರವೃತ್ತಿಗಳ ಕಿಡಿಗಳಿಗೆ ಭಾವನೆಗಳ ಗಾಳಿಯನ್ನು ಊದಿ ಜ್ವಲಿಸುವಂತೆ

ಮಾಡುವುದೇ ಕಲೆ ಮತ್ತು ಸಾಹಿತ್ಯದ ಉದ್ದೇಶ.'' ಈ ಉದ್ದೇಶವನ್ನಿಟ್ಟುಕೊಂಡೇ ಅವರು ಕಥೆ 'ಭಸ್ಮಾವೃತ ಚಿನಗಾರೀ'ಯನ್ನು ಬರೆದರು. ಇದರಲ್ಲಿ ಕಲಾಕಾರ, ಬರೇ ಹೊಟ್ಟೆ ತುಂಬಿಸಿಕೊಳ್ಳಲು ಧಂದೆ ಮಾಡುವ ಬದಲು ತನ್ನ ಕಲೆಯಿಂದ ಮನುಷ್ಯನ ವಾಸ್ತವಿಕ ಚಿಹರೆಯನ್ನು ನಮಗೆ ನೀಡುತ್ತಾನೆ. ಇಲ್ಲಿ ಅವನ ಉದ್ದೇಶ ಜೀವನೋಪಾಯದ ಅನ್ನ-ವಸ್ತ್ರಗಳನ್ನು ಸಂಪಾದಿಸಿಕೊಳ್ಳುವುದಷ್ಟೇ ಆಗಿರುವುದಿಲ್ಲ. ಅವನಿಗೆ ಎಂತಹ ಆರ್ಥಿಕ ಮುಗ್ಗಟ್ಟು ಒದಗಿದೆಯೆಂದರೆ ಅವನ ಕಣ್ಣು ಮುಂದೆಯೇ ಹೆಂಡತಿ ಸಾಯುತ್ತಾಳೆ. ಸ್ವತಃ ಅವನೇ ಬಲು ಕಂಗಾಲಾಗುತ್ತಾನೆ. ಭಿಕ್ಷುಕರು ಹಸಿವು ಚಳಿಯಿಂದ ಸಾಯುವುದನ್ನು ಕಂಡಾಗ ಅವನ ಕರ್ತವ್ಯಭಾವನೆ ಜಾಗೃತಗೊಳ್ಳುತ್ತದೆ. ಅವನು ಹೊಟ್ಟೆ ತುಂಬಿಸಿಕೊಳ್ಳುವ ಕಾಯಕವನ್ನು ಹಮ್ಮಿಕೊಳ್ಳದೆ ಮಾನವನಲ್ಲಿರುವ ಜೀವನೋತ್ಸಾಹಕ್ಕೆ ಚಾಲನೆ ಕೊಡುತ್ತಾನೆ ಮತ್ತು ನಿದ್ರಾನಿರತ ಅಂತರಾತ್ಮವನ್ನು ಬಡಿದೆಬ್ಬಿಸುತ್ತಾನೆ. ಯಶಪಾಲ್ ಸ್ವತಃ ಇಂತಹ ನೋವನ್ನುಂಡವರು. ಅವರು ಸಮಾಜದ ಚಿತ್ರಣವನ್ನು ತಮ್ಮ ಕಥೆಗಳಲ್ಲಿ ಬಿಡಿಸಿಡುತ್ತಾರೆಂಬ ಕಾರಣಕ್ಕಾಗಿಯೇ ಅವರ ಕಥೆಗಳನ್ನು ಪತ್ರಿಕೆಗಳವರು ಮರಳಿಸುತ್ತಿದ್ದರು. ಅವರು 'ಉತ್ತಮೀ ಕೀ ಮಾಂ' ಕಥೆಯ ಪೀಠಿಕೆಯಲ್ಲಿ ಬರೆಯುತ್ತಾರೆ. ''ಇತ್ತೀಚೆಗೆ ಪತ್ರಿಕೆಗಳವರು ನನ್ನನ್ನು ಕಥೆ ಕಳುಹಿಸಿಕೊಡಿರೆಂದು ಒತ್ತಾಯಿಸುತ್ತಾರೆ. ಆದರೆ ಈ ಸಂಕಲನದ 'ಭಗವಾನ್ ಕಾ ಖೇಲ್', 'ನ ಕಹನೇ ಕೀ ಬಾತ್', 'ಭಗವಾನ್ ಕೇ ಪಿತಾ ಕೇ ದರ್ಶನ್', 'ನಕಲೀ ಮಾಲ್' ಕಥೆಗಳನ್ನು ಬೆಳಕಿಗೆ ತರಲು ಬಹಳ ಅಡೆತಡೆಗಳು ಬಂದವು. ಬಹು ಒತ್ತಾಯ ಬಂದಾಗ ನಾನು ಕಥೆಗಳನ್ನು ಕಳುಹಿಸಿದರೂ ಉತ್ತರವಾಗಿ ಸಂಪಾದಕರು 'ಕಥೆ ಚೆನ್ನಾಗಿದೆ; ಆದರೆ ಸಂಚಾಲಕರು ಇದನ್ನು ಜೀರ್ಣಿಸಿಕೊಳ್ಳಲಾರರು' ಎಂದೋ, ಇಲ್ಲ 'ಈ ಕಥೆಯನ್ನು ಪ್ರಕಟಿಸಿ ತಾಪತ್ರಯಕ್ಕೆ ಸಿಕ್ಕಿಕೊಳ್ಳುವ ಇಷ್ಟವಿಲ್ಲ' ಎಂದೋ ನನಗೆ ಬರೆಯುತ್ತಿದ್ದರು'' (ಪುಟ-೬).

ಇದು ಯಶಪಾಲರ ಕಥಾಜಗತ್ತು. ಈ ಕಥೆಗಳಲ್ಲಿ ಅವರು ಗಟ್ಟಿಯಾದ ವಾಸ್ತವಿಕತೆ, ಕಾಲ್ಪನಿಕತೆ ಮತ್ತು ವಿಚಾರಧಾರೆಗಳ ತ್ರಿವೇಣಿಯನ್ನು ಸಂಗಮಿಸಿ ಕೃತಿಗಳ ನದಿಯನ್ನಾಗಿಸಿ ಹರಿಸಿದರು. ಈ ಮೂರರಲ್ಲಿ ಸಂತುಲನ ಕಾಯ್ದುಕೊಂಡು ಬರಲು ಸಾಕಷ್ಟು ಪ್ರಯತ್ನಿಸುತ್ತಿದ್ದರು. ಆದರೆ ಅದು ಒಂದೊಂದು ಸಲ ಬಲ ಕಳೆದುಕೊಳ್ಳುತ್ತಿತ್ತು. ಈ ಮೂರರ ಬಗ್ಗೆ ಯಶಪಾಲರ ವಿಚಾರಗಳು ಸ್ಪಷ್ಟ. ಹೀಗಾಗಿ ಗೋಜಲು-ಗೋಜಲಾಗುವುದಾಗಲಿ ಅಥವಾ ಭ್ರಮೆಗೆ ಸಿಗುವುದಾಗಲಿ ಅವರಲ್ಲಿ ಕಂಡು ಬರುವುದಿಲ್ಲ. ಉದಾಹರಣೆಗೆ ಯಥಾರ್ಥ ಮತ್ತು ಕಾಲ್ಪನಿಕತೆಗಳ ಹೊಂದಾಣಿಕೆಯ ಬಗೆಗೆ ಅವರೆನ್ನುತ್ತಾರೆ ''ನಮ್ಮ ಕಾಲ್ಪನಿಕತೆಗೆ ಆಧಾರ ಜೀವನದಲ್ಲಿ ಹೊರಹೊಮ್ಮುವ ಗಟ್ಟಿಯಾದ ವಾಸ್ತವಗಳೇ, ಈ ಕಾರಣ ಕಥೆಯಲ್ಲಿ ಕಾಲ್ಪನಿಕತೆಗೆ ಮಹತ್ವವಿದೆ. ನಮ್ಮ

ಕಾಲ್ಪನಿಕತೆ ಅತೀತದ ಸುಖ ದುಃಖಗಳ ಅನುಭವಗಳನ್ನು ಚಿತ್ರವಾಗಿ ಬಿಡಿಸಿಟ್ಟು ಸುಖವನ್ನು ಹೊಂದಲು ಪ್ರಯತ್ನಿಸುತ್ತದೆ: ಹಾಗಲ್ಲವಾದಲ್ಲಿ ಆದರ್ಶ ಬೊಟ್ಟು ಮಾಡಿ ಸಮಾಜದ ಮುಂದೆ ಹೊಸ ನಕಾಶೆಯನ್ನು ಬಿಡಿಸಲು ಪ್ರಯತ್ನ ಮಾಡುತ್ತದೆ'' (ಪಿಂಜರೇ ಕೀ ಉಡಾನ್, ಪುಟ-೪).

ಯಶಪಾಲರು ತಾವು ಬರೆದ ಕಥೆಗಳಲ್ಲಿ ಗಟ್ಟಿ ವಾಸ್ತವಿಕತೆಗೆ ಸ್ಥಾನ ನೀಡಿದರು ಹಾಗೂ ಅತೀತದ ಬಸಿರಿಂದ ಶೋಷಿತರು ಮತ್ತು ನೊಂದವರ ಮೇಲೆ ಹೇರಲಾದ ಅನ್ಯಾಯಗಳನ್ನು ತೆಕ್ಕಿಕೊಂಡರು. ಇತಿಹಾಸ-ಪ್ರಜ್ಞೆಯನ್ನು ಜೀವನವಾಗಿ ಬದಲಿಸಲು ಅವರು ಕಾಲ್ಪನಿಕತೆಯನ್ನು ಆಶ್ರಯಿಸಿಕೊಂಡರು. ಅವರು ಕಾಲ್ಪನಿಕತೆಯಿಂದಲೇ ಭವಿಷ್ಯದ ಸಮಾಜದ ನಕಾಶೆಯನ್ನು ಬಿಡಿಸಿಟ್ಟರು. ಆದರೆ ಈ ಕಾಲ್ಪನಿಕತೆಗೆ ಅವರು ಒಪ್ಪಿಕೊಂಡಿದ್ದ ಆದರ್ಶ ಮಾರ್ಕ್ಸ್‌ವಾದದಿಂದಲೇ ಪ್ರೇರಣೆ ಸಿಕ್ಕಿತ್ತು. ಮಾರ್ಕ್ಸ್‌ವಾದ ಅವರ ಕಥೆಗಳ ಹೆಗಲೇರಿ ಭದ್ರವಾಗಿ ಕುಳಿತುಬಿಡುತ್ತದೆ ಎಂಬ ಆರೋಪ ಅನೇಕ ಸಲ ಅವರ ಮೇಲೆ ಬಂದಿರುವುದು ಉಂಟು. ಯಶಪಾಲರು ಈ ಆರೋಪಕ್ಕೆ ಉತ್ತರ ನೀಡಿದ್ದಾರೆ "ನನ್ನ ಕಥೆಗಳಲ್ಲಿ ಮಾರ್ಕ್ಸ್‌ವಾದಿ ಪ್ರಭಾವ ಇದ್ದಿರಬಹುದು. ಆದರೆ ನಾನು ಎಂದೂ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯನಾಗಲಿಲ್ಲ. ನನಗೆ ಅದರ ಬಗ್ಗೆ ಸಹಾನುಭೂತಿ ಇದೆ. ನಾನು ಒಂದು ನಿರ್ಧಾರಿತ ವಿಚಾರಧಾರೆಯಲ್ಲಿ ಎಂದೂ ಶಾಶ್ವತವಾದ ನಂಬಿಕೆ ಇಟ್ಟವನಲ್ಲ. ನನ್ನ ಕಥೆಗಳಿಗೆ ಆಧಾರ ಸೋದ್ದೇಶ್ಯತೆ'' (ಸಂಕೇತ್, ಸಂಪಾದಕ ಉಪೇಂದ್ರನಾಥ್ ಅಶ್ಕ್, ಪುಟ-೪೧೧). 'ನಿಶ್ಚಿತ ವಿಚಾರಧಾರೆಯಲ್ಲಿ ನನಗೆ ನಂಬಿಕೆ ಇಲ್ಲ' ಎನ್ನುವುದರಲ್ಲೇ ಯಶಪಾಲರ ವಿಕಾಸವಡಗಿದೆ. ಅವರು ಆರ್ಯಸಮಾಜ ಆತಂಕವಾದ ಮತ್ತು ಕಡೆಗೆ ಮಾರ್ಕ್ಸ್‌ವಾದದತ್ತ ವಾಲಿದರು. ಮಾರ್ಕ್ಸ್‌ವಾದ ಹೆಗಲೇರಿರುವ ಕಥೆಗಳಲ್ಲಿ ವಾಸ್ತವವಾಗಿ ಕಲ್ಪನಾಶಕ್ತಿ ಗೌಣವಾಗಿರುವುದನ್ನು ಕಾಣುತ್ತೇವೆ. ಇಂತಹ ಸಂದರ್ಭಗಳಲ್ಲಿ ಅದು ಸರಳೀಕೃತಗೊಂಡ ನಿರ್ಣಯಗಳಲ್ಲಿ ಸೀದು ಹೋಗುತ್ತದೆ. ಅಲ್ಲೆಲ್ಲಾ ಅವರ ಮಧ್ಯವರ್ಗೀಯ ಚೇತನ ಪ್ರಭಾವಶಾಲಿಯಾಗಿ ಬಿಡುತ್ತದೆ. ಅನುಭವಗಳನ್ನು ಜೀವಂತವಾದ ಸತ್ಯಸ್ಥಿತಿಗಳಿಂದ ಎತ್ತಿಕೊಳ್ಳಲಾಗದ ಕಡೆಗಳಲ್ಲಿ ಮಾತ್ರ ಈ ದೋಷ ಸ್ವಾಭಾವಿಕವಾಗಿ ಬಿಡುತ್ತದೆ. ವಿಚಾರಧಾರೆಯೇ ಹೆಚ್ಚು ಪ್ರಮುಖವಾಗಿ ಹರಡಿಕೊಳ್ಳುವ ಸ್ಥಿತಿಗೆ ಇನ್ನೂ ಒಂದು ಕಾರಣ ಹೀಗಿರಬಹುದು. ಅವರಿಗೆ ಮೊದಲಿಗೆ ಯಾವುದೋ ಕೃತಿಯ 'ಐಡಿಯಾ' ಹೊಳೆದು ಆ ನಂತರ ಇದಕ್ಕೆ ಸರಿಹೊಂದುವ ಪಾತ್ರಗಳನ್ನು ಅವರು ಆರಿಸಿಕೊಂಡು ಹೋಗಿರಬಹುದು ಅಥವಾ ಅಂತಹವನ್ನು ಸೃಷ್ಟಿಸಿಕೊಂಡಿರಬಹುದು. ಈ ತೆರನಾದ ಪ್ರಕ್ರಿಯೆಯಲ್ಲಿ 'ಐಡಿಯಾ' ಪಾತ್ರಗಳೊಡನೆ ಬೆರತುಕೊಳ್ಳಲಾರದೆ ಹೋಗಿರಬಹುದು. ಇಂತಹ ಪ್ರಸಂಗಗಳು ಯಶಪಾಲರ ಕೆಲವು ಕಥೆಗಳಿಗೆ ಅನ್ವಯಿಸುತ್ತವೆ. ಆದರೆ ಇದು

ಅವರ ಕಥೆಗಳೆಲ್ಲದರ ಬಗ್ಗೆ ಸಾಧಾರಣೀಕೃತವಾದ ನಿರ್ಣಯುವಾಗುವುದಿಲ್ಲ. ಅವರು 'ಪಾತ್ರ'ಗಳಲ್ಲೂ ವಿಚಾರಗಳನ್ನು ಅರಸುವಾಗ, ಆ 'ಪಾತ್ರ'ಗಳು ಪ್ರಾತಿನಿಧಿಕವಾಗುತ್ತವೆ. 'ಸತ್ಯ ಕಾ ದ್ವಂದ್ವ್' ಮತ್ತು 'ತುಮ್‌ನೇ ಕ್ಯೂಂ ಕಹಾ ಥಾ, ಮೈಂ ಸುಂದರ್ ಹೂಂ' ಕಥೆಗಳು ಈ ಪ್ರಕಾರಕ್ಕೆ ಉದಾಹರಣೆಗಳು.

'ಸತ್ಯ ಕಾ ದ್ವಂದ್ವ್' ಕಥೆಯು ಕೇಂದ್ರದಲ್ಲಿ ಪುರುಷೋತ್ತಮ್‌ದಾಸ್ ಟಂಡನ್ ಅವರ ವ್ಯಕ್ತಿತ್ವವಿದೆ. ಇದು ಒಟ್ಟಿನಲ್ಲಿ ಯಾವುದೇ ಕಾಂಗ್ರೆಸ್ ಮುಂದಾಳುವಿನ ಠಕ್ಕನ್ನು ಬಯಲಿಗೆಳೆಯುತ್ತದೆ. ಎರಡನೆಯ ಕಥೆ ಅಶ್ಕ ಅವರು ಹೇಳಿದ ಸತ್ಯ ಘಟನೆಯೊಂದನ್ನು ಆಧರಿಸಿದ್ದು. ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಸ್ವಾನುಭವದ ಘಟನೆಯನ್ನು ಆಧರಿಸಿ 'ಅಶ್ಕ' ಅವರು 'ಬೇಬಸೀ' (ನಿಸ್ಸಹಾಯಕತೆ) ಎಂಬ ಕಥೆಯನ್ನು ಬರೆದರೆ, ಕೇಳಿದ ಅದೇ ಘಟನೆಯನ್ನು ಯಶಪಾಲರು ಕಥೆಯಾಗಿಸಿದರು. ಎರಡೂ ಕಥೆಗಳಲ್ಲಿ ಕಂಡು ಬರುವ ಅಂತರವು ಇಬ್ಬರ ಸೃಜನಾತ್ಮಕ ಸಾಮರ್ಥ್ಯವನ್ನು ಬಿಂಬಿಸುತ್ತದೆ. ಯಶಪಾಲರ ಕಥೆಯಿಂದ ವಿಚಾರಶಕ್ತಿ ಹೊರಹೊಮ್ಮಿದರೆ, ಅಶ್ಕರ ಕಥೆ ಈಗಿರುವಂತೆ ಘಟನೆಯ ಒಳಪದರಗಳನ್ನು ಭೇದಿಸುವಲ್ಲಿ ಸೊರಗಿದೆ.

ಯಶಪಾಲರು ತಮ್ಮ ಜೀವನವಿಡೀ ಬೇಕಾದಷ್ಟು ತಿರುಗಾಡಿದ್ದಾರೆ. ದೇಶ ವಿದೇಶಗಳನ್ನು ಸಂದರ್ಶಿಸಿದ್ದಾರೆ. ಈ ಕಾರಣದಿಂದಲೇ ಕಥೆಗಳಲ್ಲಿ ಸ್ಥಾನಗಳು, ಹೆಸರುಗಳು ಮತ್ತು ಸ್ಥಿತಿಗಳ ಹರವು ಬಹಳ ದೊಡ್ಡದಾಗಿದೆ. ಪ್ರವಾಸದ ನೆನಪು ಮತ್ತು ಸಂಸ್ಮರಣಗಳನ್ನು ಬೇರೆಯಾಗಿ ಬರೆದಿದ್ದಾರೆ. ಆದರೆ ಕಥೆಗಳಲ್ಲಿ ಪ್ರಕೃತಿವರ್ಣನೆಯ ವಿಚಾರ ಬಂದಾಗ ಅಥವಾ ಪಾತ್ರಗಳನ್ನು ಆರಿಸಿಕೊಳ್ಳುವಾಗ ಇವರ ಪ್ರಭಾವದಿಂದ ದೂರ ಉಳಿಯುವುದು ಹೇಗೆ ಸಾಧ್ಯ? ಉದಾಹರಣೆಗೆ 'ಸಚ್ ಬೋಲನೇ ಕೀ ಭೂಲ್' ಕಥೆಯಲ್ಲಿ ಉತ್ತರದ ಬೆಟ್ಟ ಪ್ರದೇಶಗಳಲ್ಲಿ ಅವರು ನಡೆಸಿದ ಪ್ರವಾಸವನ್ನು ವರ್ಣಿಸಿದ್ದಾರೆ. ಅಂತರ್ಯದಲ್ಲಿ ಬಹು ನವಿರಾದ ಹೃದಯವುಳ್ಳ ಈ ಗುಡ್ಡಗಾಡು ಜನ, ಬೆಳ್ಳಗೆ ಬಟ್ಟೆ ಧರಿಸುವ ನಾಗರಿಕರಿಂದ ಮೋಸ ಹೋದಾಗ ಎಷ್ಟು ಮಟ್ಟಿಗೆ ಕಲ್ಲಾಗಬಹುದೆಂಬುದನ್ನು ಈ ಕಥೆಯಲ್ಲಿ ಬಹು ಮಾರ್ಮಿಕವಾಗಿ ಬಿಡಿಸಿಡಲಾಗಿದೆ. ಇಂತಹ ಎಷ್ಟೋ ಕಥೆಗಳಿವೆ. ಯಶಪಾಲರ ಕತೆಗಾರಿಕೆಯನ್ನು, ಒಟ್ಟಿನಲ್ಲಿ ಹೇಳುವುದಾದರೆ, ಒಬ್ಬ ಸಕ್ರಿಯ ವ್ಯಕ್ತಿಯ ಗುರಿ-ಸಾಧಕ ಪ್ರಯತ್ನಗಳ ಸರಮಾಲೆ ಎಂದು ಕರೆಯಬಹುದು. ಅವರು ಲೇಖಣಿಯ ಕಾರ್ಮಿಕರಾಗಿ ಜೀವನಪರ್ಯಂತ ನೋಡಿದ್ದು ಮತ್ತು ಕಟ್ಟಿದ್ದು ಬಹಳಷ್ಟು. ಸಾಮಂತಶಾಹಿ ಮತ್ತು ಬಂಡವಾಳಶಾಹಿ ಮೌಲ್ಯಗಳ ನಡುವೆ ನಡೆದ ಚಕಮಕಿಯಲ್ಲಿ ಅವರು ಸಮಾಜವಾದೀ ನವ್ಯತೆಯನ್ನು ರೂಢಿಸಿಕೊಳ್ಳಲು ಶ್ರಮಿಸುತ್ತಲೇ ಇದ್ದರು.

# ಕಾದಂಬರಿಕಾರ ಯಶಪಾಲ್

ಯಶಪಾಲರ ಬಹುಪಾಲು ಜೀವನ ಬರಹಕ್ಕೆ ಮೀಸಲಾಯಿತು. ಅವರು ಹೆಚ್ಚಾಗಿ ಕಥೆ-ಕಾದಂಬರಿಗಳನ್ನು ಬರೆದರು. ಅವರ ಬೆಳಕು ಕಂಡ ಕಾದಂಬರಿಗಳು ಒಟ್ಟು ಹನ್ನೊಂದು. ಅವು ಅನುಕ್ರಮವಾಗಿ ಹೀಗಿವೆ. ದಾದಾ ಕಾಮ್‌ರೇಡ್ (೧೯೪೧), ದೇಶದ್ರೋಹಿ(೧೯೪೩), ದಿವ್ಯಾ(೧೯೪೫), ಪಾರ್ಟೀ ಕಾಮ್‌ರೇಡ್ (೧೯೪೬), ಮನುಷ್ಯ್ ಕೇ ರೂಪ್ (೧೯೪೯), ಅಮಿತಾ ಬಾರಹ್ ಘಂಟೆ (೧೯೬೩) ಝೂಠಾ-ಸಚ್ ಭಾಗ-೧ (೧೯೫೮), ಝೂಠಾ-ಸಚ್ ಭಾಗ-೨(೧೯೬೦), ಬಾರಹ್ ಘಂಟೆ (೧೯೬೩), ಅಪ್ಸರಾ ಕಾ ಶಾಪ್ (೧೯೬೫), ಕ್ಯೂಂ ಫಂಸೇ (೧೯೬೮), ಮೇರೀ-ತೇರೀ ಉಸ್‌ಕೀ ಬಾತ್ (೧೯೭೫).

ಯಶಪಾಲರ ಮೊದಲ ಕಾದಂಬರಿ ದಾದಾ ಕಾಮ್‌ರೇಡ್. ರಾಜಕೀಯ ಕಥಾವಸ್ತುವನ್ನು ಆಧರಿಸಿದ್ದು. ಉಗ್ರಗಾಮಿತ್ವದಿಂದ ಮುಕ್ತರಾದ ಲೇಖಕರ ಆಸ್ಥೆ ಮಾರ್ಕ್ಸ್‌ವಾದದಲ್ಲಿ ಬೆಳೆಯುತ್ತಿದ್ದುದರ ಚಿತ್ರ ಇದರಲ್ಲಿದೆ. ಆತಂಕವಾದಿ ಚಟುವಟಿಕೆಗಳ ಮುಂದಾಳುಗಳಾಗಿದ್ದ ಸಂಗಾತಿಗಳೂ ಇದರಲ್ಲಿದ್ದಾರೆ. ಈ ದೃಷ್ಟಿಯಲ್ಲಿ ಭಾರತ ರಾಜಕೀಯ ಉಗ್ರಗಾಮಿತ್ವವನ್ನು ಕುರಿತಾದ ಪ್ರಾಮಾಣಿಕ ಮಾಹಿತಿ ಇಲ್ಲಿದೆ. ಕ್ರಾಂತಿಕಾರಿಗಳಿಗೆ ಅಹಿಂಸೆಯ ರಾಜಕೀಯದ ಒಲವಿರಲಿಲ್ಲ. ಅವರು ಭಯದ ವಾತಾವರಣವನ್ನು ನಿರ್ಮಿಸಿ ಇಂಗ್ಲಿಷರನ್ನು ಇಲ್ಲಿಂದ ಹೊರಹಾಕಬಯಸಿದರು. ಅವರ ಸಂಘಟನೆಯ ಪರಿಯಲ್ಲೇ ಅವರ ದೌರ್ಬಲ್ಯಗಳು ಸೇರಿಕೊಂಡಿದ್ದವು. ಆದರೂ ಅವರ ಅದ್ಭುತ ಸಾಹಸಗಳನ್ನು ಹಾಗೂ ನಿಷ್ಠೆಯನ್ನು ಹೊಗಳದೇ ಇರುವುದು ಆಗದ ಮಾತು. ಈ ಕಾದಂಬರಿಯಲ್ಲಿ ಈ ಎರಡನ್ನು ಹೆಚ್ಚು ಸ್ಪಷ್ಟಗೊಳಿಸಲಾಗಿದೆ. ಕ್ರಾಂತಿಕಾರಿಗಳ ಗುಪ್ತ ಚಟುವಟಿಕೆಗಳ ವೈನವಿರೇಳಿಸುವ ವಿವರಣೆಗಳು ಇಲ್ಲಿ ಹೇರಳವಾಗಿವೆ. ಕಾದಂಬರಿಯ ದಾದಾ-ಚಂದ್ರಶೇಖರ್ ಆಜಾದ್ ಮತ್ತು ಕಾಮ್‌ರೇಡ್ ಸ್ವತಃ ಯಶಪಾಲ್ ಅವರೇ. ಚಂದ್ರಶೇಖರ್ ಆಜಾದ್ ಉಗ್ರಗಾಮಿತ್ವದಲ್ಲೇ ನಂಬಿಕೆ ಇಟ್ಟವರು. ಕೊಳ್ಳೆ ಹೊಡೆದು ಜನಕ್ರಾಂತಿಗೆ ಹಣ ಕೂಡಿಸುತ್ತಿದ್ದರು. ಆದರೆ ಕಾಮರೇಡ್ ಕ್ರಮ ಕ್ರಮವಾಗಿ ಸಂಘಟನೆಯ ಹಾದಿಯನ್ನು ಹಿಡಿದರು. ಅವರು ಬಂಡವಾಳಶಾಹಿಗಳೊಡನೆ ಹೋರಾಟ ನಡೆಸಲು ಶೈಲ್ ಹಾಗೂ ರಾಬರ್ಟ್ ಮೊದಲಾದ ಪಾತ್ರಗಳ ಸಹಾಯವನ್ನು ಪಡೆದುಕೊಳ್ಳುತ್ತಿದ್ದರು. ಅವರು ಕ್ರಾಂತಿಕಾರಿಗಳ ಬೌದ್ಧಿಕ ನಿಲುವನ್ನು ಅಲುಗಾಡಿಸುತ್ತಿದ್ದರು. ವೈಜ್ಞಾನಿಕವಾಗಿ ಅರ್ಥೈಸುವ ಪ್ರಕ್ರಿಯೆಯ ಜೊತೆ ಜೊತೆ ಲೇಖಕರು, ಅಮರನಾಥ್, ಗಿರಿಧಾರಿ ಲಾಲ್, ಶೈಲ್ ಅವರ ತಂದೆ, ಅಖ್ತರ್ ಮತ್ತು ಅವನ ಹೆಂಡತಿ ಜಮೀಲ್

ಮೊದಲಾದವರಲ್ಲಿ ವೈಚಾರಿಕ ಬದಲಾವಣೆಯನ್ನು ಬಿತ್ತುತ್ತಿದ್ದರು. ಕಾದಂಬರಿಯ ಅಧ್ಯಾಯಗಳಿಗೆ 'ದುವಿಧಾ ಕೀ ರಾತ್' (ಅಸಮಂಜಸದ ರಾತ್ರಿ), ನಯೀ ಢಂಗ್ ಕೀ ಲಡಕೀ (ಹೊಸ ರೀತಿಯ ಹೆಣ್ಣು), ತೀನ್ ರೂಪ್ (ಮೂರು ರೂಪಗಳು), ಮನುಷ್ಯ್, ಗೃಹಸ್ಥ್, ಸುಲ್ತಾನ್ ಎಂಬ ತಲೆಬರಹ ಕೊಟ್ಟಿದ್ದಾರೆ.

ಕಾದಂಬರಿಯ ಇನ್ನೊಂದು ಮಗ್ಗಲು ಸ್ತ್ರೀ-ಪುರುಷರ ಸಂಬಂಧಗಳನ್ನು ಕುರಿತಾದ ನೈತಿಕತೆಯ ಮೇಲೆ ಪ್ರಹಾರ ಮಾಡುತ್ತದೆ. ಇದರಲ್ಲಿ ಶೈಲ್ ಅವಿವಾಹಿತಳಾದರೂ ಖನ್ನಾ, ಬಿ.ಎಂ. ರಾಬರ್ಟ್ಸ್, ಹರೀಶ್ ಮೊದಲಾದವರೊಡನೆ ಶರೀರ ಸಂಬಂಧ ಬೆಳೆಸುತ್ತಾಳೆ. ಜೀವಶಾಸ್ತ್ರದ ಆವಶ್ಯಕತೆಗೆ (ಶಾರೀರಕವಾದ ಬಯಕೆ) ತೃಪ್ತಿ ನೀಡುತ್ತಾನೆಂಬ ಕಾರಣ ಮಾತ್ರಕ್ಕೆ ಹೆಣ್ಣಿನ ಮೇಲೆ ಪ್ರೇಮಿ ಅಧಿಕಾರ ಭಾವನೆ ಹೊಂದುವುದನ್ನು ಅವಳು ಒಪ್ಪಿಕೊಳ್ಳುವುದಿಲ್ಲ. (ಇತ್ತ) ಹರೀಶ ಕ್ರಾಂತಿಕಾರಿ ಭಾವನೆಗಳನ್ನು ಸಂಪೂರ್ಣವಾಗಿ ಮೈಗೂಡಿಸಿಕೊಂಡಿದ್ದು ಆ ನೀತಿಗೆ ಬದ್ಧನಾಗಿದ್ದ ಕಾರಣ ಹೆಣ್ಣಿನೊಡನೆ ಶಾರೀರ ಸಂಬಂಧ ಹೊಂದುವುದಿಲ್ಲ ಎಂಬ ಆಚರಣೆಗೆ ಅನುಗುಣವಾಗಿ ನಡೆದುಕೊಳ್ಳುತ್ತಾನೆ. ಶೈಲ್‌ಳ ಬಗ್ಗೆ ನಿರ್ಲಿಪ್ತನಾಗುತ್ತಾನೆ. ಆದರೆ ಶೈಲ್ ಅವನತ್ತ ವಾಲುತ್ತಾಳೆ. ಆದರೆ ಬರುಬರುತ್ತಾ ಹರೀಶ್ ಶೈಲ್‌ಳನ್ನು ಬಯಸುವುದಷ್ಟೇ ಅಲ್ಲ, ಅವಳ ಸೆಳೆತಕ್ಕೆ ಸಿಕ್ಕಿ ಅವಳನ್ನು ನಗ್ನಳಾಗಿ ಕಾಣಬಯಸುತ್ತಾನೆ. ಅವಳು ಅವನಿಗಾಗಿ ಬಟ್ಟೆ ಕಳಚುತ್ತಾಳೆ. ಕಡೆಗೆ ಅವನೊಡನೆ ಸಂಬಂಧ ಬೆಳೆಸಿ ಬಸಿರಾಗುತ್ತಾಳೆ. ಹರೀಶನಿಗೆ ನೇಣು ಶಿಕ್ಷೆ ಆಗುತ್ತದೆ. ಆದರೂ ಅವಳು ಗರ್ಭವನ್ನು ಕಾಪಾಡಿಕೊಳ್ಳುತ್ತಾಳೆ. ಕಾದಂಬರಿಯಲ್ಲಿ ಯಶೋದಾ ಹಾಗೂ ಅಮರನಾಥರ ದಾಂಪತ್ಯ ಮತ್ತು ಹರೀಶ್ ಹಾಗೂ ನ್ಯಾನ್ಸಿಯ ಪ್ರೇಮಾತುರ ಪ್ರಸಂಗಗಳಿವೆ. ಇವುಗಳಲ್ಲಿ ಏರಿಳಿತಗಳಿವೆ. ಕಾರ್ಮಿಕರ ಕೇರಿಯಲ್ಲಿ ಅಖ್ತರ್ ಕುಟುಂಬದ ಬೇರಾದ ಕಥೆ ಇದೆ. ಈ ಎಲ್ಲ ಪ್ರೇಮ ಸಂಬಂಧಗಳ ಸೃಜನೆಯಲ್ಲಿ ಒಂದು ಪ್ರಶ್ನೆ ಉತ್ತರವನ್ನರಸುತ್ತಾ ಅಲೆದಾಡುತ್ತದೆ. ಪ್ರಶ್ನೆ 'ಮನುಷ್ಯನ ಹೃದಯದ ನೇಹ ಕೇವಲ ಒಬ್ಬನಲ್ಲಿ ಸಮಾಪ್ತಗೊಳ್ಳಬೇಕೇ ?' (ದಾದಾ ಕಾಮ್‌ರೇಡ್, ಪುಟ-೧೦೯).

ಇಲ್ಲಿ ಲೇಖಕರು ಕಾಮ-ಸಂಬಂಧಗಳ ಸಹಜತೆಯನ್ನು ಕೆದಕಿ ನೋಡುತ್ತಾರೆ. ಆಗ ಅದು ಉಚ್ಛೃಂಖಲತೆಯ ಮಿತಿಯನ್ನು ಮುಟ್ಟಿಬಿಡುತ್ತದೆ. ಇದು ಈ ಕಾದಂಬರಿಯ ದೊಡ್ಡ ದೌರ್ಬಲ್ಯವಾಗುತ್ತದೆ. ಇಲ್ಲಿ ದೃಶ್ಯವಾಗುವ ಫ್ರಾಯ್ಡ್‌ನ ಅತಿರಿಕ್ತವಾದ ಪ್ರಭಾವ ಅರಿವಿಲ್ಲದ ತೆರದಲ್ಲಿ ನುಸುಳಿ ಬಂದಿದೆ ಎಂದೆನಿಸುತ್ತದೆ. ಕಾದಂಬರಿಯ ಪಾತ್ರಗಳ ಮನಸ್ಸಿನಲ್ಲಿ ಉಂಟಾಗುವ ಘಾತ ಪ್ರತಿಘಾತಗಳ ವಿಶ್ಲೇಷಣೆಯಲ್ಲಿ ಮನೋವೈಜ್ಞಾನಿಕ ಗಾಂಭೀರ್ಯವಿಲ್ಲ. ಹೀಗಾಗಿ ಅನೇಕ ಕಡೆ ವಿಚಾರಗಳು ಉಪದೇಶಗಳಂತಾಗಿವೆ. ಅನೇಕ ಪ್ರಸಂಗಗಳು ಅನಾವ್ಯಶಕ. ಇಷ್ಟೆಲ್ಲಾ

ದೌರ್ಬಲ್ಯಗಳಿದ್ದರೂ, ಆ ವಾತಾವರಣವನ್ನು ಅರ್ಥ ಮಾಡಿಕೊಳ್ಳುವಲ್ಲಿ ಮತ್ತು ಆಗಿನ ರಾಜಕೀಯ ಸ್ಥಿತಿಯನ್ನು ಗ್ರಹಿಸಿಕೊಳ್ಳುವ ಈ ಕಾದಂಬರಿ 'ಅಗತ್ಯ' ಅನಿಸಿಬಿಡುತ್ತದೆ.

'ದೇಶದ್ರೋಹಿ' ಎಂಬುದು ಯಶಪಾಲರ ಎರಡನೆಯ ರಾಜಕೀಯ ಕಾದಂಬರಿ. ೧೯೪೨ರ ರಾಷ್ಟ್ರೀಯ ಘಟನೆಗಳನ್ನು ಆಧರಿಸಿದ್ದು. ಇದು ಕಾಂಗ್ರೆಸ್ ಮತ್ತು ಕಮ್ಯೂನಿಸ್ಟ್ ಶಕ್ತಿಗಳ ನಡುವಿನ ಹೋರಾಟದ ಕಾಲ. ಹಾಗೆಯೇ ಪ್ರಪಂಚದಲ್ಲಿ ಫ್ಯಾಸಿಸ್ಟ್ ಶಕ್ತಿಗಳ ವಿರುದ್ಧ ಸೋವಿಯತ್ ಒಕ್ಕೂಟದ ನೇತೃತ್ವದಲ್ಲಿ ಮಿತ್ರ ರಾಷ್ಟ್ರಗಳು ನಡೆಸಿದ ಯುದ್ಧದ ಕಾಲ. ಕಾದಂಬರಿಗೆ ಎರಡು ಧ್ರುವಗಳು. ಆದರೂ ಯಶಪಾಲರ ಜಾಣ್ಮೆ ಎರಡನ್ನು ಹೊಂದಿಸಿಕೊಳ್ಳುತ್ತದೆ. ಅವರು ರಾಜಕೀಯ ಮತ್ತು ಪ್ರೇಮ ಸಂಬಂಧಗಳನ್ನು ಒಟ್ಟೊಟ್ಟಾಗಿ ಮುಂದಿಡುತ್ತಾ ಇದನ್ನು ವಿಕಾಸ ಪ್ರಕ್ರಿಯೆಯ ಅನ್ವೇಷಣೆ ಎನ್ನುತ್ತಾರೆ.

ರಾಜಕೀಯದ ಕೇಂದ್ರದಲ್ಲಿ ದಿಲ್ಲಿ ಇದೆ; ಈ ಕಾರಣ ಕಥೆಯ ಎಳೆಗಳು ಅಲ್ಲಿಂದಲೇ ಬಿಚ್ಚಿಕೊಳ್ಳುತ್ತವೆ. ಈ ಕಾದಂಬರಿಯ ಮುಖ್ಯ ಪಾತ್ರ ಖನ್ನಾ, ಸೈನ್ಯದಲ್ಲಿ ಡಾಕ್ಟರ್. ಇವನನ್ನು ರಾಜಸ್ತಾನದ 'ಬಜೀರಿಯಾ'ಗಳು ಹಿಡಿದು ಬಿಡುತ್ತಾರೆ. ಅಲ್ಲಿ ಆತ ಒಂದು ವರ್ಷ ಕಾಲ ಇರುತ್ತಾನೆ. ನಂತರ ಆತ ಗಜನಿ ಮತ್ತು ರಷ್ಯಾಗೆ ಪ್ರವಾಸ ಹೋಗುತ್ತಾನೆ. ಅಲ್ಲಿಂದ ಮರಳಿದ ಮೇಲೆ ಕಾರ್ಮಿಕರ ನಡುವೆ ಕೆಲಸ ಮಾಡುತ್ತಾನೆ. ಖನ್ನಾನ ಪ್ರವಾಸ ಪ್ರಸಂಗಗಳ ನಡುವೆ ಅವನ 'ಕಾಮ' ಪ್ರಕಟಗೊಳ್ಳುತ್ತದೆ. ಆರಂಭದಲ್ಲಿ ಲೇಖಕರು 'ಬಜೀರಿಗಳ' ಜೀವನವನ್ನು ಕುರಿತು ವರ್ಣನೆ ನೀಡುತ್ತಾರೆ. ಇಂಗ್ಲಿಷರನ್ನು ಕಂಡರೆ ಅವರಿಗಿರುವ ತಿರಸ್ಕಾರವನ್ನು ಹಾಗೂ ಸ್ವತಃ ತಮ್ಮ ಜೀವನದಲ್ಲಿ ಕಾಣುವ ತೃಪ್ತಿಯನ್ನೂ ಕಾದಂಬರಿಯಲ್ಲಿ ಬಹು ಚೆನ್ನಾಗಿ ವರ್ಣಿಸಿದ್ದಾರೆ. ಪಠಾಣ್ ಸುಂದರಿಯರ ಸ್ವಾಭಾವಿಕ ಕಾಮೇಚ್ಛೆಯನ್ನು ಲೇಖಕರು ಇಲ್ಲಿ ಕಾಣಿಸಿದ್ದಾರೆ. ಡಾ. ಖನ್ನಾ ಈ ಪ್ರಸಂಗದಲ್ಲಿ ವಾಸ್ತವತೆಯ ಇನ್ನೊಂದು ಮುಖವನ್ನು ಕಂಡುಕೊಳ್ಳುತ್ತಾರೆ. ಜೀವನ ಎಂಬುದು ಒಂದು ನಿರ್ಣಯಿಸಲ್ಪಟ್ಟ ಕ್ರಮವಲ್ಲ; ನೈತಿಕತೆಯ ನಿಯಮಗಳು ಸರ್ವೋಪರಿ ಹಾಗೂ ಸಾರ್ವಕಾಲಿಕವಲ್ಲ ಎಂಬ ಅಂಶವನ್ನು ಅವರು ಒಪ್ಪಿಕೊಳ್ಳುತ್ತಾರೆ. ಆಗ್ರಾ, ಡೆಲ್ಲಿ ಮತ್ತು ಈ ಪ್ರದೇಶಗಳ ನಡುವೆ ಎಷ್ಟೊಂದು ಅಂತರವಿದೆ. ಬಜೀರಿಗಳು ಡಾ. ಖನ್ನಾ ಅವರನ್ನು ಮುಸಲ್ಮಾನರಾಗಿಸಿದರೂ ಯಾವುದೇ ಅಂತರ ಕಂಡುಬರುವುದಿಲ್ಲ. ಕಾದಂಬರಿಯಲ್ಲಿ ಡಾ. ಖನ್ನಾ ಅವರ ಮನಸ್ಸಿನಲ್ಲಿ ನಡೆದ ಮಂಥನ ಅವರ ಮಧ್ಯವರ್ಗೀಯ ಸಂಸ್ಕಾರಗಳನ್ನು ಕೊಚ್ಚಿ ಹಾಕುತ್ತದೆ. "ನಮ್ಮಲ್ಲಿ ಹೆಣ್ಣು ಗಂಡಿನ ಸಲುವಾಗಿ ಪ್ರಾಣ ಅರ್ಪಿಸಲು ಹಾತೊರೆಯುವ ಹಾಗೆ ಬಜೀರಿ ಹೆಂಗಸರಲ್ಲಿ ಇಲ್ಲ. ಅಂದ ಮೇಲೆ ನಮ್ಮಲ್ಲಿನ ಸ್ತ್ರೀಯರು ಬೇರೆಯ ರೀತಿಯವರೇ. ಮತ್ತು

ಬಜೀರಿಸ್ತಾನದವರು ಬೇರೆಯ ರೀತಿಯವರೇ? ದೆಹಲಿ ಮತ್ತು [illegible]ತ್ರದ ಮನೆಗಳಲ್ಲಿ ಹುಟ್ಟಿದರೆಂಬ ಕಾರಣಕ್ಕಾಗಿ ಹೆಣ್ಣು ಮಕ್ಕಳು ತ್ಯಾಗಮಯಿಗಳು ಮತ್ತು ಪತಿವ್ರತೆಯರಾಗುತ್ತಾರೆಯೋ? ಹಾಗೆಯೇ ಗುಡ್ಡಗಾಡು ಪ್ರದೇಶಗಳಲ್ಲಿ ಹುಟ್ಟಿದರಾದ ಕಾರಣ ಅಲ್ಲಿನ ಹೆಂಗಸರು ಸ್ವಾರ್ಥಿಗಳು, ಕ್ರೂರಿಗಳು ಮತ್ತು ಕುಲಟೆಯರಾಗಿ ಬಿಡುತ್ತಾರೆಯೋ?" (ದೇಶದ್ರೋಹೀ, ಪುಟ-೪೯).

ಡಾ. ಖನ್ನಾ ಅವರ ಅಪಹರಣವಾದಾಗ, ಅವರ ಸಾವೇ ಸಂಭವಿಸಿತು ಎನ್ನುವ ಸುದ್ದಿಯಾಗಿ ಅವರ ಮನೆಗೆ ಮುಟ್ಟಿತು. ಅವರ ಹೆಂಡತಿ ರಾಮದುಲಾರಿಗೆ ದುಃಖವೇನೋ ಆಗುತ್ತದೆ. ಆದರೆ ಆಕೆ ಉಳಿದ ಆಯುಷ್ಯವನ್ನು ಕಸದ ಬುಟ್ಟಿಗೆಸದ ಹಾಗೆ ವ್ಯರ್ಥವಾಗಿಸುವುದಿಲ್ಲ. ಆಕೆ ಕಾಂಗ್ರೆಸ್ ಧುರೀಣ ಬದರೀಬಾಬುವನ್ನು ಮದುವೆ ಆಗುತ್ತಾಳೆ. ತಮ್ಮ ಪ್ರವಾಸಗಳನ್ನೆಲ್ಲ ಮುಗಿಸಿ ಬಂದ ಖನ್ನಾ ಅವರಿಗೆ ಈ ಎಲ್ಲದರ ವಿವರ ತಿಳಿದಾಗ ರಾಮದುಲಾರಿಯ ನಿರ್ಣಯಕ್ಕೆ ತಮ್ಮ ಸ್ವೀಕೃತಿ ನೀಡುತ್ತಾರೆ. ಚಂದಾಳೊಂದಿಗೆ ಅವರ ಸಂಬಂಧ ಬೆಳೆಯುತ್ತದೆ. ಆದರೆ ಆಗ್ಗ ಅವರ ಧೋರಣೆ ಹೀಗೆ "ಪುರುಷನ ವಂಶವನ್ನು ಕಾದುಕೊಂಡು ಬರುವ ಸಲುವಾಗಿ ಸಂತಾನೋತ್ಪತ್ತಿಗೆ ಸಾಧನವಾಗುವುದರ ಜೊತೆಗೆ, ಸ್ತ್ರೀಗೂ ತನ್ನದೇ ಆದ ವ್ಯಕ್ತಿತ್ವ ಹಾಗೂ ಆಸೆ ಆಕಾಂಕ್ಷೆಗಳು ಇರುವುದು ಸಹಜವಲ್ಲವೇ?.... ನಿನ್ನದಾದ ವ್ಯಕ್ತಿತ್ವಕ್ಕೆ ಅವಕಾಶವಿಲ್ಲದ, ನಿನ್ನ ಇಚ್ಛೆಗೆ ಯಾವುದೇ ಬೆಲೆ ಇರದ, ಮನೆ ನಿನ್ನದಾಗುವುದಿಲ್ಲ. ನೀನು ಆ ಮನೆಯ ಒಂದು ವಸ್ತುವಾಗುತ್ತೀ?...." (ಅದೇ, ಪುಟ-೨೪೪).

ಚಂದಾ ಹೆಣ್ಣಾಗಿ ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸದಾ ಸಂಘರ್ಷ ಮಾಡುತ್ತಾಳೆ. ಕಾದಂಬರಿಯ ಈ ಪಕ್ಷ ಬಹುವಾಗಿ ರೋಮಾಂಟಿಕ್ ವಿವರಗಳನ್ನೊಳಗೊಂಡಿದೆ. ಆದರೆ ಇದರಲ್ಲಿ ನಿಷೇಧಗಳ ವಿರುದ್ಧ ಲೇಖಕರ ಯುದ್ಧ ಗಟ್ಟಿಗೊಂಡಿದೆ. ಧರ್ಮಾಂಧತೆಯತ್ತಣಿಂದ ಮುಕ್ತಿ ಪಡೆಯುವ ಪ್ರಯತ್ನಗಳೂ ಇಲ್ಲಿ ಕಂಡುಬರುತ್ತವೆ. ಈ ಸಂಬಂಧವಾದ ಅತಿ ವಿವರಣೆಯ ಕಾರಣ ಲೇಖಕರ ಗುರಿ ಇದೇ ಹೌದೇನೋ ಎಂಬ ತಪ್ಪು ಅಭಿಪ್ರಾಯ ಮೂಡುತ್ತದೆ. ಜೊತೆಗೆ ಕಾಮ ಪ್ರಸಂಗಗಳಲ್ಲಿ ಕಂಡು ಬರುವ 'ಉಚ್ಛೃಂಖಲ' ಲಕ್ಷಣಗಳು ಬೇರೆ ಬೇರೆ ಸ್ಥಿತಿಗಳಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ಕಡೆಗೆ ಎಲ್ಲವೂ, ರಾಜಕೀಯ ಸ್ಥಿತಿಗಳತ್ತ ಜಾರಿಕೊಳ್ಳುತ್ತವೆ. 'ದೇಶದ್ರೋಹೀ'ಯ ರಾಜಕೀಯ ವಿಚಾರಧಾರೆ ಅತ್ಯಂತ ಕುತೂಹಲಕಾರಿಯಾಗಿದೆ. ಈ ಪಾತ್ರಗಳು ತಮ್ಮ ವೈಯಕ್ತಿಕ ಸಮಸ್ಯೆಗಳೊಡನೆ ಬಡಿದಾಡುತ್ತಾ, ರಾಷ್ಟ್ರೀಯ ರಾಜಕೀಯ ಪ್ರಶ್ನೆಗಳೊಂದಿಗೆ ಸೆಣಸಾಟ ನಡೆಸುತ್ತವೆ. ಪ್ರಶ್ನೆಗಳಿಗೆ ಉತ್ತರವನ್ನು ಅರಸುವ ಸುದೀರ್ಘವಾದ ವಿವಾದಗಳು ಇಲ್ಲಿವೆ. ಬದ್ರೀಬಾಬೂ-ಗಾಂಧೀವಾದಿ, ಶಿವನಾಥ್-ಕಾಂಗ್ರೆಸ್ ಸಮಾಜವಾದಿ ಹಾಗೂ ಡಾ. ಖನ್ನಾ-ಕಮ್ಯೂನಿಸ್ಟ್ ಈ ಮೂವರಲ್ಲಿ ಚರ್ಚೆಗಳು

ಏಳುತ್ತವೆ. ಕಡೆಗೆ ಲೇಖಕರು ಕಮ್ಯೂನಿಸ್ಟ್ ರಾಜನೀತಿಯನ್ನೇ ಸರಿ ಎಂದು ಸಾಧಿಸಿಕೊಳ್ಳುತ್ತಾರೆ. ಇಲ್ಲಿ ತರ್ಕದ ಪ್ರಕ್ರಿಯೆ ಸಾರ್ಥಕಗೊಂಡಿದೆ; ವೈಜ್ಞಾನಿಕವಾದುದೂ ಆಗಿದೆ. ಖನ್ನಾ ಅವರ ಮೂಲಕ ತತ್ಕಾಲೀನ ರಾಜಕೀಯದಲ್ಲಿ ಕಮ್ಯೂನಿಸ್ಟರ ಸ್ಥಿತಿಯ ತಾತ್ವಿಕ ವಿಶ್ಲೇಷಣೆ ಇದೆ.

'ದೇಶದ್ರೋಹೀ'ಯಲ್ಲಿ ರೊಮಾನ್ಸ್ ಮತ್ತು ರಾಜನೀತಿ ಹೊಂದಿಕೊಂಡು ಸಮಸಮವಾಗಿ ಮುಂದೆ ಸಾಗುತ್ತವೆ. ಅಲ್ಲಲ್ಲಿ 'ರೋಮಾಂಟಿಕ್' ಸಂದರ್ಭಗಳಲ್ಲಿ ಲೇಖಕನ ಆವೇಶ ಹೆಚ್ಚು ಗಟ್ಟಿಗೊಂಡಿದೆ. ಈ ಕಾರಣಕ್ಕಾಗಿಯೇ ವಿಮರ್ಶಕರು ಇದನ್ನು ಪ್ರಭಾವದ ದೃಷ್ಟಿಯಿಂದ ಟೀಕಿಸಿದ್ದಾರೆ. ಇದು ದೌರ್ಬಲ್ಯವಿರಬಹುದು; ಆದರೆ ಯಶಪಾಲರು ತಮ್ಮ ಉದ್ದೇಶವನ್ನು ಎಂದೂ ಮರೆತಿಲ್ಲ. ತಮ್ಮ ಈ ಉದ್ದೇಶವನ್ನು ಉಳಿಸಿಕೊಳ್ಳುವಾಗ ಅವರು ಸೃಜನಾತ್ಮಕತೆಯ ತತ್ವಗಳನ್ನು ಮರೆತುಬಿಡುತ್ತಾರೆ. ಕಾದಂಬರಿಯ ಬಗ್ಗೆ ಪರಿಚಯ ಮಾಡಿಕೊಡುವಾಗ ಅವರು ತಮ್ಮ ಉದ್ದೇಶ ಏನೆಂಬುದನ್ನು ಕುರಿತು ಸ್ಪಷ್ಟವಾಗಿ ಬರೆದಿದ್ದಾರೆ "ಲೇಖಕನು ಕಲಾಕಾರನೂ ಆದಾಗ, ಸಮಾಜದ ಉಳಿದ ಶ್ರಮಜೀವಿಗಳಂತೆ ಉಪಯುಕ್ತತೆಯನ್ನು ಸೃಷ್ಟಿಸುವಲ್ಲಿಯೇ ಅವನ ಪ್ರಯತ್ನದ ಸಾಫಲ್ಯ ಕಾಣುವುದು."

ಕಾಲಕ್ರಮದ ದೃಷ್ಟಿಯಿಂದ 'ದಿವ್ಯಾ' ಯಶಪಾಲರ ಮೂರನೆಯ ಕಾದಂಬರಿ. ಆದರೆ ಕಥಾವಸ್ತು ಮೊದಲೆರಡಕ್ಕಿಂತ ಭಿನ್ನವಾಗಿದೆ. ಇತಿಹಾಸದ ಸಾಮಗ್ರಿಯನ್ನು ಹೊಂದಿದೆ. ಈ ಬೆಳಕಿನಲ್ಲಿ ಅವರು ಮೊಟ್ಟ ಮೊದಲ ಬಾರಿಗೆ ಒಂದು ವಿಶಿಷ್ಟ ಕೃತಿಯನ್ನು ನೀಡಿದ್ದಾರೆ. ಇತಿಹಾಸದಿಂದ ಕಥಾವಸ್ತುವನ್ನು ಎತ್ತಿಕೊಂಡು ಆಚಾರ್ಯ ಚತುರಸೇನ್, ಭಗವತೀಚರಣ್ ವರ್ಮಾ ಮತ್ತು ರಾಹುಲ ಸಾಂಕೃತ್ಯಾಯನ್ ಅವರು ಇದುವರೆಗಾಗಲೇ ಬರೆಯಲು ಶುರು ಮಾಡಿದ್ದರು. ಚತುರಸೇನರ ದೃಷ್ಟಿಯಲ್ಲಿ ಅತೀತವು ವರ್ತಮಾನವನ್ನು ಕುಬ್ಜವಾಗಿಸುತ್ತದೆ. ಭಗವತೀಚರಣ್ ವರ್ಮಾ ಅವರ ಪ್ರಕಾರ ಮಾನವನು ಪರಿಸ್ಥಿತಿಗಳ ಕೈಗೊಂಬೆ. ಆದರೆ ರಾಹುಲ್ ಮತ್ತು ಯಶಪಾಲರು ಜೀವನದ ವಾಸ್ತವತೆಗಳನ್ನು ಅತೀತದಲ್ಲಿ ಹುಡುಕುತ್ತಾ ಅದರಲ್ಲಿ ವರ್ತಮಾನದ ವಿಕಾಸಶೀಲ ಪ್ರವಾಹಗಳನ್ನು ಕಂಡುಕೊಳ್ಳುತ್ತಾರೆ. ಈ ಕಾರ್ಯ ಇತಿಹಾಸ ದೃಷ್ಟಿ, ವರ್ತಮಾನ ದೃಷ್ಟಿ ಮತ್ತು ಕಾಲ್ಪನಿಕತೆಗಳ ಸಂಯೋಗದಿಂದ ಪೂರ್ಣಗೊಳ್ಳುತ್ತದೆ. ಯಶಪಾಲರೆನ್ನುವಂತೆ 'ದಿವ್ಯಾ' ಇತಿಹಾಸವಲ್ಲ. ಐತಿಹಾಸಿಕ ಕಾಲ್ಪನಿಕತೆ ಮಾತ್ರ (ಭೂಮಿಕೆ). ಈ ಕಾದಂಬರಿಯಲ್ಲಿ ಹದಿಮೂರು ಅಧ್ಯಾಯಗಳಿವೆ. ಮಧುಪರ್ವ್, ಧರ್ಮಸ್ಥ ಕಾ ಪ್ರಾಸಾದ್, ಪ್ರೇಸ್ಥ, ಆಚಾರ್ಯ ಪ್ರವರ್ಧನ್, ಆತ್ಮಸಮರ್ಪಣ್, ವಿಕಟ ವಾಸ್ತವ್, ತಾತ್ ಧರ್ಮಸ್ಥ, ದಾರಾ, ಅಂಶುಮಾಲಾ, ಸಾಗಲ್, ಪೃಥುಸೇನ್ ಮತ್ತು ರುದ್ರಧೀರ್, ಮಲ್ಲಿಕಾ ಮತ್ತು ದಿವ್ಯಾ. ಈ ಎಲ್ಲ ಶೀರ್ಷಿಕೆಗಳು ಪಾತ್ರ,

ಪ್ರವೃತ್ತಿ ಮತ್ತು ಸ್ಥಾನವಾಚಕಗಳು.

ಇವರ ಕಥೆ ಬುದ್ಧನ ಕಾಲದ್ದು. ಯವನ ರಾಜ ಮಿಲಿಂದನು ಭದ್ರದಲ್ಲಿ ರಾಜ್ಯವನ್ನೇನೋ ಸ್ಥಾಪಿಸಿದ, ಆದರೆ ಅವನು ಭಿಕ್ಷುವಾದ. 'ಕುಲಗಣ ರಾಜ್ಯ ಪರಿಷದ್' ಮಹಾಸೇನಾಪತಿ ಮಿಥೋದ್ರಸ್‌ನನ್ನು ಗಣಪತಿಯಾಗಿ ಸ್ವೀಕರಿಸಿತು. ಹಾಗೂ ಧರ್ಮಸ್ಥಾನದ ಹೊಣೆಗಾರಿಕೆ ಮಹಾಪಂಡಿತ ದೇವಶರ್ಮನ ಆಧಿಪತ್ಯಕ್ಕೆ ಬಂತು. 'ಕುಲಗಣ ರಾಜ್ಯ' ಮತ್ತು ಧರ್ಮಸ್ಥಾನದ 'ಆದೇಶ'ಗಳ ನಡುವೆ ಎದ್ದ ವಿರೋಧದ ಅಲೆಗಳ ಕಾರಣ, ಬ್ರಾಹ್ಮಣ ಸಾಮಂತರು, ದಾಸರು ಮತ್ತು ಶ್ರೇಷ್ಠಿಗಳ ನಡುವೆ ಅಧಿಕಾರಕ್ಕಾಗಿ ತಿಕ್ಕಾಟ ಪ್ರಾರಂಭವಾಯಿತು. ಈ ಸಂಘರ್ಷದ ನಡುವೆ ಇನ್ನೊಂದು ವ್ಯವಸ್ಥೆ ರೂಪುಗೊಂಡಿತು. ಇದರ ಪ್ರಕಾರ ಸಮಸ್ತ ಸಂಪತ್ತು ಗಣರಾಜ್ಯದ್ದಾಗಿ, ಪ್ರಜೆಗಳೆಲ್ಲರಿಗೂ ಒಂದೇ ತೆರನಾದ ನ್ಯಾಯ ವ್ಯವಸ್ಥೆ, ದಾಸರಿಗೆ ಮುಕ್ತಿ, ಬಲಿ ಕೊಡುವಿಕೆಯಿಂದ ಬಿಡುಗಡೆ ಎಂಬ ನಿಯಮಗಳು ಅಮಲಿನಲ್ಲಿ ತರಲಾದವು. ದಾಸಪುತ್ರ ಪೃಥುಸೇನ್ ಸೇನಾಪತಿ ಆದನು. ಇದಕ್ಕೆ ಭಿನ್ನವಾದ ವ್ಯವಸ್ಥೆಯಲ್ಲಿ ಹಣ ಪ್ರಾಧಾನ್ಯತೆ ಪಡೆಯುತ್ತದೆ. ಹಣ ಬಲದಿಂದ ಗಣದ ಸದಸ್ಯತ್ವ ಲಭಿಸುತ್ತದೆ. ಈ ಕಾರಣದಿಂದ ಮಹಾಶ್ರೇಷ್ಠಿ ಪ್ರೇಸ್ಥ ಗಣ ಸಂವಾಹಕನಾಗುತ್ತಾನೆ. ರುದ್ರಧೀರ ಮಾಗಧದಿಂದ ಮರಳುತ್ತಾನೆ. ಅಲ್ಲಿನ ವರ್ಣಾಶ್ರಮ ವ್ಯವಸ್ಥೆಯನ್ನು ಕಂಡಿದ್ದು ಇಲ್ಲಿಯೂ ಅಂತಹುದೇ ವ್ಯವಸ್ಥೆ ತರಲು ಪಿತೂರಿ ಹೂಡುತ್ತಾನೆ. ಈ ಪ್ರಯತ್ನದಲ್ಲಿ ಅವನಿಗೆ ಯಶ ಸಿಕ್ಕಿ ವರ್ಣಾಶ್ರಮ ಆಧಾರಿತ ಕ್ರಮ ನೆಲೆಗೊಳ್ಳುತ್ತದೆ. ಶೂದ್ರರು ಮತ್ತು ದಾಸರು ಮತ್ತೆ ಕೆಳವರ್ಣದವರೆನಿಸಿಕೊಳ್ಳುತ್ತಾರೆ.

ಈ ಕಾದಂಬರಿಯಲ್ಲಿ ವರ್ಗಗಳಾಗಿ ಬೌದ್ಧರು, ದಾಸರು, ಸಾಮಂತರು, ಬ್ರಾಹ್ಮಣರು ಮೊದಲಾದವರಿದ್ದಾರೆ. ಒಂದೆಡೆ ಸಾಗಲ್ ಮತ್ತು ಮಧುರಾಪುರಿಯ ವೈಭವ ವಿಲಾಸಗಳಿವೆ. ಇನ್ನೊಂದೆಡೆ ಚಾರ್ವಾಕ ನಿರೂಪಿತ ಭೌತಿಕವಾದಿ ಸಿದ್ಧಾಂತಗಳಿವೆ. 'ದಿವ್ಯಾ' ಜೀವನವಿಡೀ ನಾರೀವಿಮುಕ್ತಿಗಾಗಿ ಹೋರಾಡುತ್ತಾಳೆ. ಕುಲಸ್ತ್ರೀಯಾಗಿ ಅವಳಿಗೆ ಬಂಧನ ಹಾಗೂ ದಾಸ್ಯ. ಅದೇ ವೇಶ್ಯೆಯಾಗಿ ಸ್ತ್ರೀ ಸ್ವಾತಂತ್ರ್ಯ ಪಡೆಯುತ್ತಾಳೆ. ಅವಳು ರುದ್ರಧೀರ್‌ನೊಡನೆ ಹೇಳಿಕೊಳ್ಳುತ್ತಾಳೆ. "ಜ್ಞಾನಿ ಆಚಾರ್ಯರೇ, ಕುಲವಧುವಿನ ಗೌರವ, ಕುಲಮಾತೆಯ ಆದರ, ಮತ್ತು ಕುಲ ಮಹಾದೇವಿ ಎಂಬ ಅಧಿಕಾರ ಇವೆಲ್ಲಾ ಆರ್ಯ ಪುರುಷನು ನೀಡುವ ಪ್ರಶ್ರಯವಷ್ಟೇ" (ಪುಟ-೨೧೩). ಅವಳು ಮಾರಿಶನಿಗೆ ಸಮರ್ಪಿತೆ. ಏಕೆಂದರೆ ಅವನು ಆಶ್ರಯವನ್ನು ಕೊಡುಕೊಳ್ಳುವದಾಗಿಸ ಬಯಸುತ್ತಾನೆ. ಈ ನಶ್ವರ ಜೀವನದಲ್ಲಿ ತೃಪ್ತಿಯ ಅನುಭೂತಿಯನ್ನು ಕೊಡಬಲ್ಲವನಾಗಿದ್ದಾನೆ (ಪುಟ-೨೧೪). ದಾರಾ ಮತ್ತು ಅಂಶುಮಾಲೆಯ ವೇಷ ಧರಿಸಿ ಅಲೆಮಾರಿಯಾಗಿ ಕಡು ಕಷ್ಟ ಉಂಡ ದಿವ್ಯಾ ಕಡೆಗೊಮ್ಮೆ ಭೌತಿಕ ಜೀವನದಲ್ಲೇ ಸಮಾನತೆಯ

ಅಧಿಕಾರ ಹೊಂದಿ ಒಬ್ಬ ಪುರುಷನನ್ನು ವರಿಸುತ್ತಾಳೆ. ಇಲ್ಲಿ ಯಶಪಾಲರು ಸಂಭೋಗಸುಖ ಮತ್ತು ಸಂತಾನೋತ್ಪತ್ತಿಗಳನ್ನೇ ಜೀವನದ ಅನಿವಾರ್ಯತೆಗಳೆಂದು ಹೇಳಿ ಪಾತ್ರಗಳನ್ನು ಆರಿಸಿಕೊಳ್ಳುತ್ತಾರೆ. ದಿವ್ಯಾ, ಸೀರೋ, ಪೃಥುಸೇನ್ ಮತ್ತು ಮಾರಿಶನಂತಹ ಪಾತ್ರಗಳನ್ನು ಕಲ್ಪಿಸಿ ದಾಸವರ್ಗ ಮತ್ತು ಸ್ತ್ರೀಯರನ್ನು ಮುಕ್ತಿಯತ್ತ ನಡೆಸುತ್ತಾರೆ. ಈ ಕಾದಂಬರಿಯು ನಮಗೆ ಒಂದು ಸ್ಥಿತ್ಯಂತರದ ಕಥೆಯನ್ನು ಹೇಳುತ್ತದೆ.

'ಪಾರ್ಟೀ ಕಾಮರೇಡ್' -ಯಶಪಾಲರ ಮುಂದಿನ ರಾಜಕೀಯ ಕಾದಂಬರಿ. ಕಾಲಕ್ರಮದ ದೃಷ್ಟಿಯಿಂದ ಇದು ನಾಲ್ಕನೆಯದು. ಇದು ೧೯೪೫ರ ಚುನಾವಣೆ ಮತ್ತು ನಾವಿಕರ ದಂಗೆಯ ಹಿನ್ನೆಲೆಯನ್ನಿಟ್ಟುಕೊಂಡು ಬರೆದದ್ದು. 'ರೋಮಾನ್ಸ್' ಮತ್ತು ರಾಜಕೀಯದ ಎಳೆಗಳನ್ನು ಹೆಣೆದು ಈ ಕಾದಂಬರಿಯನ್ನು ಬರೆಯಲಾಗಿದೆ. ಸ್ತ್ರೀ ಪಾತ್ರ ಗೀತಾ-ರೊಮಾಂಟಿಕ್ ಪ್ರವೃತ್ತಿಗಳನ್ನು ಬೆಳಕಿಗೆ ತರುತ್ತಾಳೆ. ಗೀತಾ ಪಾರ್ಟಿಯ ಕೆಲಸ ಮಾಡುತ್ತಾಳೆ. ಪಾರ್ಟಿ ಫಂಡ್ ಕೂಡಿಸುವ ಹವಣಿಕೆಯಲ್ಲಿರುವಾಗ, ಅವಳು 'ಅಸಾಮಾಜಿಕ ತತ್ವ'ವೆನಿಸಿದ ಸೇಠ್ ಭವಾರಿಯಾನನ್ನು ಸಂಧಿಸುತ್ತಾಳೆ. ಗೀತಾ ಅವನನ್ನು ಬದಲಿಸುತ್ತಾಳೆ. ಸಾಮ್ರಾಜ್ಯವಾದದ ವಿರುದ್ಧವಾದ ಭಾವನೆಗಳು ಅವನಲ್ಲಿ ಕೆರಳುತ್ತವೆ. ಭವಾರಿಯಾ ಈ ನಿಟ್ಟಿನಲ್ಲಿ ಸಕ್ರಿಯವಾಗಿ ತನ್ನ ಪ್ರಾಣವನ್ನೂ ಅರ್ಪಿಸುತ್ತಾನೆ. ಗೀತಾ ಮತ್ತು ಭವಾರಿಯಾ ಅವರ ಸಂಬಂಧ ಬರೇ ಪ್ರಣಯ ಸಂಬಂಧವಾಗಿ ಉಳಕೊಳ್ಳದೆ ವೈವಾಹಿಕ ರೂಪಾಂತರವನ್ನು ಹೊಂದುತ್ತದೆ. ಯಶಪಾಲರ ದೃಷ್ಟಿಯಲ್ಲಿ ಕ್ರಾಂತಿಕಾರಿಗಳ ಜೀವನದಲ್ಲೂ ಉಳಿದವರಂತೆ ಈ ಅನಿವಾರ್ಯತೆ ಇದ್ದದ್ದೇ. ಅದನ್ನು ರಹಸ್ಯವಾಗಿಡಲು ಇಷ್ಟಪಡುವುದಿಲ್ಲ. ಅವರೆನ್ನುತ್ತಾರೆ "ಕೆಲವರು ಇದನ್ನು ಪ್ರಚಾರವೆನ್ನಬಹುದು. ಆದರೆ ಸತ್ಯ ಸಂಗತಿಯನ್ನು ಹೇಳದೆ ಹೋದರೆ ಕೋತಿ, ಆನೆ ಮತ್ತು ಕತ್ತೆಗಳ ವಾಸ್ತವಿಕ ಪರಿಚಯ ಮಾಡಿಕೊಡಬೇಕೇನು ? ಯಾರನ್ನು ಕುರಿತು ಲೇಖಕ ಕಥೆ ಬರೆಯುತ್ತಾನೋ, ಅವರ ವಿಚಾರಗಳನ್ನು, ನಡಾವಳಿಗಳನ್ನು ಬಣ್ಣಿಸುವುದರಿಂದಲೇ ವಾಸ್ತವಿಕ ಪರಿಚಯ ಸಾಧ್ಯ, ಇದು ಪ್ರಚಾರವಾಗುವುದಿಲ್ಲ" (ಪೀಠಿಕೆ).

ಕಾದಂಬರಿಯ ರಾಜಕೀಯ ವಿಷಯ ಕಮ್ಯೂನಿಸ್ಟ್ ಪಾರ್ಟಿಯ ಆಗಿನ ಕಾರ್ಯಕ್ರಮಗಳನ್ನು ಆಧರಿಸಿದೆ. ಯಶಪಾಲರು ಕಾಂಗ್ರೆಸ್ ಪಾರ್ಟಿಯಲ್ಲಿನ ಅಂತರ್ವಿರೋಧವನ್ನೂ, ಬಂಡವಾಳಶಾಹಿಗಳೊಡನೆ ಅವರ ಸ್ನೇಹ ಸಾಹಚರ್ಯಗಳನ್ನೂ, ಅದರ ಜನವಿರೋಧೀ ನೀತಿಗಳನ್ನೂ ಬಯಲು ಮಾಡಿದ್ದಾರೆ. ಇದರಿಂದಲೇ ಸಾಮ್ಯವಾದಿಗಳಲ್ಲೂ ಕಾಂಗ್ರೆಸ್ಸಿನವರಲ್ಲೂ ಸಂಘರ್ಷವಿರುವುದು; ಅಂತರ್‍ರಾಷ್ಟ್ರೀಯ ರಾಜಕೀಯ ವಿಚಾರಗಳೂ ಈ ಚಕಮಕಿಗೆ ಕಾರಣ. ನಾವಿಕರ ದಂಗೆ ನಡೆದದ್ದೂ ಈ ಕಾಲದಲ್ಲೇ.

ಸಾಮ್ಯವಾದಿಗಳು ಅದನ್ನು ಸಮರ್ಥಿಸಿದರು. ಆದರೆ ಕಾಂಗ್ರೆಸ್ ಸಮರ್ಥಿಸಲಿಲ್ಲ. ಇಂಗ್ಲಿಷರು ಈ ಸತ್ಯಾಗ್ರಹವನ್ನು ಹತ್ತಿಕ್ಕಿದರು. ಕಾದಂಬರಿಯಲ್ಲಿ ಇದನ್ನು ಅತ್ಯಂತ ಕಾರುಣಿಕವೆನಿಸುವ ಹಾಗೆ ಬಿಡಿಸಿಡಲಾಗಿದೆ. ಕಲೆಯ ದೃಷ್ಟಿಯಿಂದ ನೋಡಿದಾಗ ಹಿಂದಿನ ದೌರ್ಬಲ್ಯಗಳು ಇದರಲ್ಲೂ ಇವೆ.

'ಮನುಷ್ಯ ಕೇ ರೂಪ್' (ಮನುಷ್ಯನ ಚಹರೆಗಳು) ಕಾದಂಬರಿಯಲ್ಲಿ ಗುಡ್ಡಗಾಡಿನ ಒಬ್ಬ ವಿಧವೆ ಸೋಮಾ ಕೇಂದ್ರ ಪಾತ್ರವಾಗಿದ್ದಾಳೆ. ಅವಳು ಸುಂದರಿ. ಇನ್ನೂ ಯುವತಿಯಾಗಿರುವಾಗಲೇ ಗಂಡನನ್ನು ಕಳೆದುಕೊಳ್ಳುತ್ತಾಳೆ. ಈಗ ಅವಳು ಅತ್ತೆ-ಮಾವಂದಿರಿಗೆ, ವಾರಗಿತ್ತಿಗೆ ದಾಸಿಯಷ್ಟೇ. ಸೋಮಾಳ ತಂದೆ-ತಾಯಿಗಳು ಅವಳನ್ನು ೫೦೦ ರೂ.ಗಳಿಗೆ ಮಾರಿ ಬಿಟ್ಟಿದ್ದರು. ವಿಧವೆ ಆದ ಮೇಲೆ ಅತ್ತೆ ಮಾವಂದಿರು ಅವಳನ್ನು ಮಾರಲು ಹವಣಿಸುತ್ತಾರೆ. ಧನಸಿಂಗ್, ಒಬ್ಬ ಡ್ರೈವರ್. ಈ ಹಾದಿಯಲ್ಲಿ ಮೋಟಾರು ಚಾಲಕನಾಗಿದ್ದ ಅವನಿಗೆ 'ಸೋಮಾಳ' ದಾರುಣ ಕಥೆ ತಿಳಿದಿದೆ. ಅವನಿಗೆ ಅವಳಲ್ಲಿ ಆಕರ್ಷಣೆ. ಅದಕ್ಕೆಂದು ಅವಳನ್ನು ರಕ್ಷಿಸುತ್ತಾನೆ. ಅವಳನ್ನು ಹಾರಿಸಿಕೊಂಡು ಹೋಗುತ್ತಾನೆ. ಸೋಮಾಳ ಮಾವ ಅವನ ಮೇಲೆ ದೂರು ಕೊಡುತ್ತಾನೆ. ಅವನಿಗೆ ಜೇಲಾಗುತ್ತದೆ. ಪೋಲೀಸರು ಧನಸಿಂಹನನ್ನು ಬಿಡುಗಡೆ ಮಾಡುತ್ತೇವೆಂದು ಹೇಳಿ ಪ್ರತಿಯಾಗಿ ಸೋಮಾಳನ್ನು ಭೋಗಿಸುತ್ತಾರೆ. ಆದರೆ ಇದರಿಂದ ಏನೂ ಪ್ರಯೋಜನವಾಗುವುದಿಲ್ಲ. ಅವಳು ಅಲ್ಲಿಂದ ಹೊರ ಬಿದ್ದು ಆಶ್ರಯವಿಲ್ಲದಿರುವ ಸ್ಥಿತಿಯಲ್ಲಿ ಕಮ್ಯೂನಿಸ್ಟ್ ಭೂಷಣನನ್ನು ಸಂಧಿಸುತ್ತಾಳೆ. ಅವನು ಅವಳನ್ನು ಒಬ್ಬ ಶ್ರೀಮಂತ ಕುಟುಂಬದ ಲಾಲಾ ಜ್ವಾಲಾಸಹಾಯ್ ಸರೋಲಾರ ಬಂಗಲೆಯಲ್ಲಿ ಸೇರಿಸುತ್ತಾನೆ. ಜ್ವಾಲಾಸಹಾಯರ ಮಗಳು ಮನೋರಮಾ ಎಡಪಕ್ಷದ ವಿಚಾರಧಾರೆಯಿಂದ ಪ್ರಭಾವಿತಳಾದವಳು. ಹಾಗೂ ಭೂಷಣನಲ್ಲಿ ಅವಳಿಗೆ ಪ್ರೀತಿ. ಹೀಗಾಗಿ ಮನೋರಮಾಳ ಸಹಾನುಭೂತಿಯ ಕಾರಣ ಸೋಮಾ ಆ ಕುಟುಂಬದಲ್ಲಿ ಕೆಲವು ಕಾಲ ಇರುತ್ತಾಳೆ. ಆದರೆ ಸ್ವಲ್ಪ ಸಮಯ ಕಳೆದ ಮೇಲೆ ಅವಳನ್ನು ಹೊರದೂಡುತ್ತಾರೆ. ಜೇಲಿನಿಂದ ಹೊರಬಂದ ಧನಸಿಂಹ ಲಾಲಾಜಿಯ ಬಳಿ ಕಾರ್ ಡ್ರೈವರ್ ಆಗಿ ಸೇರಿಕೊಳ್ಳುತ್ತಾನೆ. ಸೋಮಾ-ಧನಸಿಂಹರು ಪತಿಪತ್ನಿಯರಂತೆ ಕೆಲವು ಕಾಲ ಒಟ್ಟುಗೂಡಿರುತ್ತಾರೆ. ಸೋಮಾ ಪೋಲೀಸರಿಗೆ ತನ್ನ ದೇಹವನ್ನು ಒಪ್ಪಿಸಿದ್ದ ವಿಚಾರ ಧನಸಿಂಹನಿಗೆ ತಿಳಿದಿರುತ್ತದೆ. ಈ ನೆನಪು ಅವನ ಮನಸ್ಸಿನಲ್ಲಿ ಗ್ರಂಥಿಯಾಗಿ ಉಳಿದು ಅವನನ್ನು ಹಿಂಸಿಸುತ್ತದೆ. ಹೀಗಿರುವಾಗ ಕೆಲ ಪುಂಡರು ಸೋಮಾಳ ಹಿಂದೆ ಬೀಳುತ್ತಾರೆ. ಅವರಿಂದ ಸೋಮಾಳನ್ನು ಕಾಪಾಡುವಾಗ ಧನಸಿಂಹ ಒಂದಿಬ್ಬರನ್ನು ಕೊಲ್ಲುತ್ತಾನೆ ಮತ್ತೆ ಅವನಿಗೆ ಜೇಲಾಗುತ್ತದೆ. ಜೇಲಿನಿಂದ ಬಿಡುಗಡೆ ಹೊಂದಿದ ನಂತರ ಅವನು ಸೈನ್ಯಕ್ಕೆ ಸೇರಿಕೊಳ್ಳುತ್ತಾನೆ. ಅಲ್ಲಿಂದ ಹೊರಬಿದ್ದ ಮೇಲೆ ಸೋಶಿಯಲಿಸ್ಟರ ಜೊತೆ

ಕೆಲಸ ಮಾಡುತ್ತಾನೆ.

ಈ ನಡುವೆ ಲಾಲಾಜಿಯವರ ಮನೆಯಿಂದ ಹೊರದೂಡಲಾದ ಮೇಲೆ ಸೋಮಾ 'ಬರಕತ್' ಎಂಬ ಡ್ರೈವರ್‌ನ ಜೊತೆ ಮುಂಬಯಿಗೆ ಬಂದು ಸೇರುತ್ತಾಳೆ. ಈಗ ಅವಳಿಗೆ ದೇಹದ ಪಾವಿತ್ರ್ಯ ಅನ್ನುವುದಕ್ಕೆ ಯಾವ ಅರ್ಥವೂ ಉಳಿದಿರುವುದಿಲ್ಲ. ಇದೇ ಜಾಡಾಗಿ ಅವಳು ಮುಂದಕ್ಕೆ ಬರುತ್ತಾಳೆ. 'ಪಹಾಡಿನ್' ಎಂಬ ಹೆಸರಿನ ಅಭಿನೇತ್ರಿ ಆಗುತ್ತಾಳೆ. ಇತ್ತ ಭೂಷಣ್ ಈಗಾಗಲೇ ಕಮ್ಯೂನಿಸ್ಟ್ ಪಕ್ಷದ 'ಲೋಕ್‌ಯುದ್ಧ'ದಲ್ಲಿ ಕೆಲಸ ಮಾಡಲು ಮುಂಬಯಿಗೆ ಬಂದಿರುತ್ತಾನೆ. ಮನೋರಮಾ ಸ್ವತಂತ್ರ ವಿಚಾರ ಹಾಗೂ ಸ್ವಭಾವದ ಕಾರಣದಿಂದ ಮನೆಯಲ್ಲಿನ ಜಗಳಗಳಿಗೆ ಕಾರಣಳಾಗುತ್ತಾಳೆ. ಹೀಗಾಗಿ ಅವಳು ಮುಂಬಯಿಯ ಒಬ್ಬ ಪಾರಸೀ ಯುವಕ ಸುತಲೀವಾಲಾನನ್ನು ಮದುವೆ ಆಗಿ ಮುಂಬಯಿಗೆ ಬರುತ್ತಾಳೆ. ಕಾದಂಬರಿಯ ಮೂರೂ ಪಾತ್ರಗಳು ಈ ಮುಂಬಯಿಯಲ್ಲೇ. ಮನೋರಮಾಳ ಸ್ವಭಾವ ಮತ್ತು ವಿಚಾರಗಳು ಸುತಲೀವಾಲಾನೊಡನೆ ಹೊಂದಾಣಿಕೆಗೆ ಎಡೆ ಮಾಡಿಕೊಡದಾಗುತ್ತವೆ. ಇದರಿಂದ ವಿಚ್ಛೇದನವಾಗುತ್ತದೆ. ಇತ್ತ ಧನಸಿಂಹ ಕಾನ್‌ಪುರದಲ್ಲಿ ಸಿನಿಮಾದಲ್ಲಿ ಸೋಮಾಳನ್ನು ನೋಡಿ ಅವಳನ್ನು ಹುಡುಕಿಕೊಂಡು ಮುಂಬಯಿಗೆ ಬರುತ್ತಾನೆ. ಮನೋರಮಾ ಮತ್ತು ಭೂಷಣರ ಜೊತೆ ಸೋಮಾಳ ಮನೆಗೆ ಹೋಗುತ್ತಾನೆ. ಆಗ ಗೂಂಡಾಗಳು ಇವರ ಮೇಲೆ ಹಲ್ಲೆ ಮಾಡುತ್ತಾರೆ. ಭೂಷಣ ಬಲವಾಗಿ ಗಾಯಗೊಂಡು ಅಸು ನೀಗುತ್ತಾನೆ. ಪೋಲೀಸರು ಧನಸಿಂಹನನ್ನು ಕಸ್ಟಡಿಗೆ ತೆಗೆದುಕೊಳ್ಳುತ್ತಾರೆ. ಸೋಮಾ ಅವನನ್ನು ನೋಡಿದರೂ ಉಳಿಸಿಕೊಳ್ಳುವ ಪ್ರಯತ್ನ ಮಾಡುವುದಿಲ್ಲ. ಸುತಲೀವಾಲಾ ಸೋಮಾಳನ್ನು ಮದುವೆಯಾಗಬಯಸುತ್ತಾನೆ. ಭೂಷಣನ ಸಾವಿನಿಂದ ಮನೋರಮಾ ಕಂಗಾಲಾಗುತ್ತಾಳೆ.

ಹೀಗೆ ಈ ಕಾದಂಬರಿಯ ಮುಖ್ಯ ಪಾತ್ರಗಳಾದ ಸೋಮಾ, ಧನಸಿಂಹ, ಸುತಲೀವಾಲಾ ಇವರೆಲ್ಲರ ಬದಲಾಗುವ ಚೆಹರೆಗಳು ನಮ್ಮ ಮುಂದೆ ಬಂದು ನಿಲ್ಲುತ್ತವೆ. ಇವೆಲ್ಲಾ ಬಂಡವಾಳಶಾಹಿ ವ್ಯವಸ್ಥೆಯ ಮೂಲಕ ಮನುಷ್ಯನ ಅಮಾನವೀಕರಣದ ಪ್ರಕ್ರಿಯೆಯ ರೂಪವನ್ನೇ ಬಯಲು ಮಾಡುತ್ತವೆ. ಪಾತ್ರ ಸೃಷ್ಟಿಯ ದೃಷ್ಟಿಯಿಂದ ಭಗವತ್ ಶರಣ ಉಪಾಧ್ಯಾಯರೆನ್ನುವಂತೆ 'ಇದು ಸಾಧಾರಣವೆನಿಸುವ ಸುಂದರ ಕೃತಿ.'

'ಅಮಿತಾ' ಯಶಪಾಲರ ಎರಡನೆಯ ಐತಿಹಾಸಿಕ ಕಾದಂಬರಿ. ಮೊದಲ ಮಾತಿನಲ್ಲಿ ಅವರು ಬರೆದಿದ್ದಾರೆ. "ದಿವ್ಯಾದ ಕಥೆಯಂತೆ 'ಅಮಿತಾ'ದ ಕಥೆಯೂ ಇತಿಹಾಸವಲ್ಲ. ಕಾಲ್ಪನಿಕತೆಯೇ ಹೌದು. ಅಶೋಕನು ಕಳಿಂಗ ವಿಜಯಕ್ಕೆಂದು ಯುದ್ಧ ಮಾಡಿದ್ದು ಮತ್ತು ಈ ಯುದ್ಧದ ಪರಿಣಾಮವಾಗಿ ಭವಿಷ್ಯದಲ್ಲಿ ಯುದ್ಧವನ್ನು ಕೈಗೊಳ್ಳುವುದಿಲ್ಲ ಎಂದು ಪಣ ತೊಟ್ಟದ್ದು-ಇಷ್ಟು ಮಾತ್ರ

ಇತಿಹಾಸದ ಪ್ರಾಮಾಣಿಕ ಘಟನೆಗಳು. ಅಶೋಕನು ತನ್ನ ಈ ಪ್ರತಿಜ್ಞೆಯನ್ನು ಶಿಲಾಶಾಸನಗಳಲ್ಲಿ ಶಾಶ್ವತಗೊಳಿಸಿದ್ದಾನೆ. ನನ್ನ ಕಾಲ್ಪನಿಕ ಕಥೆಯಲ್ಲಿ ಇತಿಹಾಸದ ಅಂಶ ಇಷ್ಟು ಮಾತ್ರ.'' ಕಾದಂಬರಿಯ 'ಅಮಿತಾ' ಒಬ್ಬ ಮುಗ್ಧ ಬಾಲೆ. ಅವಳ ಸ್ವಾಭಾವಿಕ ಸುಂದರ ನಡವಳಿಕೆ ಪರಾಕ್ರಮಿಯಾದ ಅಶೋಕನನ್ನು ಯುದ್ಧದಿಂದ ವಿಮುಖಗೊಳಿಸುತ್ತದೆ. ಇನ್ನೊಂದು ಪಾತ್ರ ದಾಸಿ ಹಿತಾಳದು. ಅವಳು ಅಮಿತೆಯನ್ನು ಸಾಕಿ ಪೋಷಿಸುತ್ತಾಳೆ ಮತ್ತು ಅವಳಿಗೆ ವಿದ್ಯೆ ನೀಡುತ್ತಾಳೆ. ಅವಳು ಅಮಿತೆಯ ಮೂಲಕ ಒಬ್ಬ ಕುಶಲ ಸ್ತ್ರೀಯಂತೆ ಗುರ್ತಿಸಲ್ಪಡುತ್ತಾಳೆ. ಅವಳಲ್ಲಿ ವಾತ್ಸಲ್ಯವಿದೆ. ಎಂತಲೇ ಅವಳಲ್ಲಿ ಅಮಿತೆಯನ್ನು ಸಾಕುವ ಸಾಮರ್ಥ್ಯವಿದೆ. ಐತಿಹಾಸಿಕ ದೃಷ್ಟಿಯಿಂದ ಈ ಕಾದಂಬರಿಯನ್ನು ಬರೆದ ಬಗ್ಗೆ ಯಶಪಾಲರು ಅನ್ನುತ್ತಾರೆ ''ಅಮಿತಾ ಬರೆಯುವುದಕ್ಕೆ ಮುಂಚೆ ಪ್ರಾಮಾಣಿಕವಾದ ಇತಿಹಾಸದಲ್ಲಿ ಅಶೋಕನ ಕಳಿಂಗ ವಿಜಯದ ವಿಚಾರಗಳೇನಾದರೂ ದೊರೆಯುತ್ತವೆಯೋ ಎಂದು ಅರಿಯಲು ಪ್ರಯತ್ನಿಸಿದ್ದೇನೆ. ಅಶೋಕನು ಕಳಿಂಗ ವಿಜಯವನ್ನು ಸಾಧಿಸಿದ ಕಾಲದಲ್ಲಿ ಅಲ್ಲಿ ರಾಜ್ಯವಾಳುತ್ತಿದ್ದವರು ಯಾರು? ಎಂಬ ಉಲ್ಲೇಖ ಇತಿಹಾಸದಲ್ಲಿ ಎಲ್ಲೂ ಕಂಡು ಬರುವುದಿಲ್ಲ. ಇತಿಹಾಸದ ಈ ಅಭಾವವನ್ನು ನಾನು ನನ್ನ ಕಾಲ್ಪನಿಕತೆಯ ಪರಿಕರಗಳನ್ನು ಸಂಗ್ರಹಿಸಿಕೊಳ್ಳಲು ಉಪಯೋಗಿಸಿಕೊಂಡಿದ್ದೇನೆ. 'ಅಮಿತಾ'ದಲ್ಲಿ ಸಾಮಾಜಿಕ ಸಮಸ್ಯೆಗಳನ್ನೇ ಎತ್ತಿಕೊಳ್ಳಲಾಗಿದೆ'' (ಯಶಪಾಲರ ಪತ್ರ್ಯ ಸಂ. ಮಧುರೇಶ, ಪು. ೪೬-೪೭). ಹೆಸರಿಸಬಹುದಾದ ಯಶಪಾಲರ ಕೃತಿಗಳಲ್ಲಿ ಇದನ್ನು ಪರಿಗಣಿಸಲಾಗದು.

'ಝೂಠಾ-ಸಚ್' (ಸುಳ್ಳು ಸತ್ಯ) ಕಾದಂಬರಿ ಪ್ರಪಂಚದ ಅತ್ಯಂತ ಮಹತ್ವಪೂರ್ಣ ಕೃತಿ. ಇದರ ಎರಡೂ ಭಾಗಗಳನ್ನು ಬಹು ಬುದ್ಧಿವಂತಿಕೆಯಿಂದ ಹಾಗೂ ಬಹು ಪರಿಶ್ರಮದಿಂದ ರಚಿಸಲಾಗಿದೆ. ಇದು ವಿಶ್ವ ಸಾಹಿತ್ಯದ ಮಟ್ಟದಲ್ಲಿ ನಿಲ್ಲುವ ಕೃತಿ. ಇದು ಎರಡು ಭಾಗಗಳಲ್ಲಿದೆ. ವತನ್ ಔರ್ ದೇಶ್, ಮತ್ತು ದೇಶ್ ಕಾ ಭವಿಷ್ಯ್. ಭಾರತದ ಬಿಡುಗಡೆ, ಮತ್ತು ದೇಶ ವಿಭಜನೆಯ ದುರಂತ. ಸ್ವಾತಂತ್ರ್ಯಾನಂತರದ ಜನ ಸೇವೆಯ ಹೆಸರಿನಲ್ಲಿ ನಮ್ಮ ನೇತಾರರು ಹರಡಿಕೊಂಡಿರುವ ಭ್ರಷ್ಟ ರೀತಿ ನೀತಿಗಳ ಜಾಲ,ಮತೀಯ ಚಟುವಟಿಕೆಗಳಿಗೆ ನೀಡಲಾಗುತ್ತಿರುವ ಪ್ರೋತ್ಸಾಹ, ಮತ್ತು ಮಧ್ಯಮ ವರ್ಗದ ರೋಮಾಂಟಿಕ್ ಮನೋವೃತ್ತಿಗಳ ವಿಸಂಗತಿಗಳೇ ಈ ಕಾಂದಬರಿಯ ವಸ್ತು ಜಗತ್ತು. ಕಥೆಯ ಕೇಂದ್ರ ಲಾಹೋರ್ ಮತ್ತು ದಿಲ್ಲಿ. ಇದರ ಹೆಚ್ಚು ಪಾತ್ರಗಳು ನಿಮ್ನ ಮಧ್ಯ ವರ್ಗಕ್ಕೆ ಹಾಗೂ ಉಚ್ಚ ಮಧ್ಯ ವರ್ಗಕ್ಕೆ ಸೇರಿದವುಗಳು. ಮೇಲ್ವರ್ಗದ ತನ್ನದೇ ಅಸ್ತಿತ್ವ ಸ್ಥಿತಿ ಇದ್ದದ್ದೇ, ಆದರೆ ಆಗು-ಹೋಗುಗಳು ಹಾಸುಹೊಕ್ಕಾಗಿ ಚಲಿಸುವುದು ತಥಾಕಥಿತ ಬುದ್ಧಿಜೀವಿಗಳ ಆಸುಪಾಸಿನಲ್ಲೇ. ಇದೇ ಕಾದಂಬರಿಯ ಗಡಿರೇಖೆಯೂ ಹೌದು. ಈ ಬುದ್ಧಿಜೀವಿಗಳಲ್ಲಿ ಜನ ಸಾಮಾನ್ಯರಿಗೆ

ವಿಶ್ವಾಸದ್ರೋಹ ಬಗೆಯುವವರೂ ಇದ್ದಾರೆ; ಜನಸೇವಕರೂ ಇದ್ದಾರೆ. ಲಾಹೋರಿನಲ್ಲಿ ಭೋಲಾ ಪಾಂಧೆ ಒಂದು ಗಲ್ಲಿ. ಅಲ್ಲಿ ಹಿಂದುಗಳು ಮುಸಲ್ಮಾನರು ಅನೇಕ ವರ್ಷಗಳಿಂದ ನೆರೆಹೊರೆಯವರಾಗಿ ಪ್ರೀತಿ-ವಿಶ್ವಾಸದಿಂದ ಬಾಳುತ್ತಿದ್ದಾರೆ. ಇಲ್ಲಿನ ಒಂದು ಕುಟುಂಬದವರೇ ಜಯದೇವ ಪುರಿ ಮತ್ತು ಅವನ ತಂಗಿ ತಾರಾ. ಆರಂಭಕ್ಕೇನೋ ಜಯದೇವ ಪುರಿಯಲ್ಲಿ ದೇಶಭಕ್ತಿ ಕಾಣಿಸಿಕೊಳ್ಳುತ್ತದೆ. ಆದರೆ ಬರು ಬರುತ್ತಾ ಹಣ ಸಂಪಾದನೆಯ ಲೋಭ ಮತ್ತು ಮಹತ್ವಾಕಾಂಕ್ಷೆಗಳ ವ್ಯೂಹದಲ್ಲಿ ಸಿಕ್ಕಿಕೊಳ್ಳುತ್ತಾನೆ. ಈ ರೋಗ ಅಂಟಿಕೊಂಡ ಮೇಲೆ ಅವನಲ್ಲಿ ಔಚಿತ್ಯ-ಅನೌಚಿತ್ಯಗಳ ಪರಿಜ್ಞಾನವೇ ಉಳಿಯುವುದಿಲ್ಲ. ಸೋಮರಾಜನಂತಹ ಉಡಾಳನೊಡನೆ ತನ್ನ ತಂಗಿ ತಾರಾಳ ಮದುವೆ ನಡೆಯುವುದನ್ನು ನಿಲ್ಲಿಸಲು ಅವನು ತಂಗಿಗೆ ಯಾವುದೇ ನೆರವನ್ನು ನೀಡುವುದಿಲ್ಲ. ತನ್ನ ಸ್ವಾರ್ಥ ಸಾಧಿಸಿಕೊಳ್ಳಲು ಸಮಯ ಸಿಕ್ಕಾಗ ತನ್ನ ತಂಗಿಗೆ ಕೆಟ್ಟ ಹೆಸರು ಹಚ್ಚಲೂ ಹೇಸುವುದಿಲ್ಲ. ಅವನು ಕನಕಳನ್ನು ಪ್ರೀತಿಸುತ್ತೇನೆಂದು ನಾಟಕ ಹೂಡಿ ತಂದೆ ತಾಯಿಗಳ ಇಚ್ಛೆಗೆ ವಿರುದ್ಧವಾಗಿ ಅವಳನ್ನು ಮದುವೆ ಆಗುತ್ತಾನೆ. ಆದರೆ ಅವಳ ಜೀವನವನ್ನು ಹಾಳು ಮಾಡಿ ಅವಳನ್ನು ಬಿಡುತ್ತಾನೆ. ಊರ್ಮಿಳೆಯ ಕಷ್ಟ ಪರಂಪರೆಗಳಿಗೂ ಅವನೇ ಕಾರಣ. ಇಷ್ಟೆಲ್ಲಾ ಮಾಡಿ ಅವನು 'ಸೂದ್'ನಂತಹ ಕಾಂಗ್ರೆಸ್ ಪುಢಾರಿಯ ಕೈಗೆ ಸಿಕ್ಕಿಹಾಕಿಕೊಳ್ಳುತ್ತಾನೆ. ಪ್ರೆಸ್‌ನ ಒಡೆಯನಾಗಿ ಪತ್ರಿಕಾ ಸಂಪಾದಕನಾಗುತ್ತಾನೆ. ಈ ಸ್ಥಾನದಲ್ಲಿ ಕುಳಿತು ಅವನು ಸಮಯಸಾಧಕನ ಪಾತ್ರ ನಿರ್ವಹಿಸುತ್ತಾನೆ. ಇಂತಹ ಪತ್ರಿಕಾವೃತ್ತಿ ಮತ್ತು ದೇಶಭಕ್ತಿ ಎಂದು ಕರೆಸಿಕೊಳ್ಳುವ ಸ್ಥಿತಿ, ವಾಸ್ತವದಲ್ಲಿ ಭಾರತೀಯ ರಾಜನೀತಿಯ ಅಪ್ರಮಾಣಿಕವೂ ಆದರೆ ಪ್ರಬಲವಾದದ್ದೂ ಆದ ಪ್ರವೃತ್ತಿ ಎಂಬುದರತ್ತ ಯಶಪಾಲರು ಬಹು ಚೆನ್ನಾಗಿ ನಮ್ಮ ಗಮನ ಸೆಳೆಯುತ್ತಾರೆ. 'ಝೂಠಾ-ಸಚ್'ನಲ್ಲಿ ಕಂಡು ಬರುವ ಇತರ ಪಾತ್ರಗಳು ಅಂದರೆ -ಸೋಮರಾಜ್, ಮಾಸ್ಟರ್ ರಾಮ ಭುಲಾಯಾನನ ಅಣ್ಣ, ಪುರಿಯ ದೊಡ್ಡಪ್ಪ ರಾಮಜ್ವಾಯಾ, ರತನ್, ಶಿಲೋಳ ಗಂಡ, ನಥವಾಮಲ್, ಪ್ರಸಾದ್‌ಜೀ, ಅವಸ್ಥೀಜೀ, ಮಿಸೆಜ್ ಪಂತ್, ಕೌಸಲ್ಯಾ ದೇವೀ ಇವೇ ಮೊದಲಾದವರು.

ಇವರೆಲ್ಲಾ ದೇಶ ವಿಭಜನೆಯಿಂದ ದೊರೆತ ಆಸ್ತಿ-ಪಾಸ್ತಿಗಳನ್ನು ಕೊಳ್ಳೆ ಹೊಡೆಯುವುದು, ಸ್ವಾತಂತ್ರ್ಯಾನಂತರ ಸಿಕ್ಕಿದ ಸೌಲಭ್ಯಗಳನ್ನೆಲ್ಲಾ ಗಳಿಸಿಕೊಳ್ಳುವುದು, ಕ್ಯಾಂಪಿನಲ್ಲಿರುವ ವಯಸ್ಸಿಗೆ ಬಂದ ಹುಡುಗಿಯರನ್ನು ಭೋಗಿಸುವುದು, ಇವುಗಳಲ್ಲೇ ಮುಳುಗೇಳುತ್ತಾರೆ. ಇವರೆಲ್ಲರಿಗೂ ಸ್ವಾರ್ಥ ಸಾಧನೆಯೇ ಜೀವನದ ಪರಮೋದ್ದೇಶ. ಹಿಂದುಗಳು ಎಲ್ಲವನ್ನು ಕಳೆದುಕೊಂಡು ಹಿಂದುಸ್ತಾನಕ್ಕೆ ಬರುತ್ತಾರೆ. ನೆಲೆಯೂರಲು ಸಂಘರ್ಷ ಮಾಡುತ್ತಾ ದಾರುಣ ಕಷ್ಟಗಳಿಗೆ ಸಿಕ್ಕಿ ಬಾಳು ಸವೆಸುತ್ತಾರೆ. ಆದರೆ ಪರಿಸ್ಥಿತಿಗಳ ಲಾಭ

ಪಡೆದುಕೊಳ್ಳುವವರು ಈ ಸ್ವಾರ್ಥ ಸಾಧಕರ ತಂಡ. ಈ ನಡುವೆ ತಾರಾ ಮತ್ತು ಸೋಮರಾಜರ ಮದುವೆ ನಡೆದಿದ್ದು ಅವರು ಪರಸ್ಪರ ದೂರಾಗಿರುತ್ತಾರೆ. ಪುರಿ ಮತ್ತು ಕನಕ ಸೇರುತ್ತಾರೆ, ಮತ್ತೆ ದೂರಾಗುತ್ತಾರೆ. ಕಾಂತಾ ಮತ್ತು ನೈಯರ್ ಹಾಗೂ ಪಂಡಿತ್ ಗಿರಿಧಾರೀಲಾಲ್ ಅವರದೂ ಇದೇ ಹಣೆಬರಹ. ಇಲ್ಲೆಲ್ಲಾ ಹಿಂದಿನ ಸಂಪ್ರದಾಯಗಳು ಮತ್ತು ಮತೀಯ ದಂಗೆಗಳ ಮನೋಭಾವವೇ ಪ್ರಬಲಗೊಳ್ಳುತ್ತದೆ. ಈ ಎಲ್ಲ ಭ್ರಷ್ಟ ದೃಶ್ಯಗಳನ್ನು ಯಶಪಾಲರು ಬಹು ದಾರುಣವೆನ್ನುವಂತೆ ಚಿತ್ರಿಸಿದ್ದಾರೆ.

ಯಶಪಾಲರ ಕಾದಂಬರಿಗಳಲ್ಲಿ ಕತ್ತಲೆ ಇದ್ದಲ್ಲಿ ಬೆಳಕೂ ಇದೆ. ಇಂತಹ ಭಯಂಕರ ವಿಪತ್ತಿನಲ್ಲೂ ಜನಗಳನ್ನು ಕಾಪಾಡಲೆಳಸುವ ವ್ಯಕ್ತಿಗಳನ್ನು ಅರಿಸಿಕೊಂಡಿದ್ದಾರೆ. ಅರ್ಥಶಾಸ್ತ್ರಿಗಳಾದ ಡಾ. ನಾಥ್, ಡಾ. ಶ್ಯಾಮಾ, ಪತ್ರಕರ್ತ ಕನಕ ಮತ್ತು ಗಿಲ್, ಇಂಜನೀಯರ್ ನರೋತ್ತಮ್ ಮತ್ತು ನರ್ಸ್ ಮರ್ಸೀ ಮೊದಲಾದವರು ಜನಗಳ ಒಳಿತಿಗಾಗಿ ಸದಾ ಕಾಲಕ್ಕೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಚಡ್ಡಾ ಮಾರ್ಕ್ಸ್‌ವಾದಿ ಕಮ್ಯೂನಿಸ್ಟ್ ಕಾರ್ಯಕರ್ತ ಇಂತಹ ಪರಿಸ್ಥಿತಿಗಳ ವಿದ್ರೂಪದಿಂದ ಪಾರಾಗಲು ದಾರಿ ಯಾವುದೆಂದು ಅರಸುತ್ತಿರುತ್ತಾನೆ. ಇವರೆಲ್ಲ ನೆಲೆಯಿಲ್ಲದೆ ಅಲೆದಾಡುವ ಜನರ ಸಲುವಾಗಿ ಶಿಬಿರಗಳನ್ನು ತೆಗೆಯುತ್ತಾರೆ. ಹಾಗೂ ಅವರ ಪ್ರಾಣಗಳನ್ನುಳಿಸಲು ಸಹಕರಿಸುತ್ತಾರೆ. ಅವರಿಗಾಗಿ ಚಂದಾ ಎತ್ತುತ್ತಾರೆ. ಯಶಪಾಲರು ಇಂತಹ ಪರಿಸ್ಥಿತಿಯನ್ನು ದುರುಪಯೋಗ ಪಡಿಸಿಕೊಳ್ಳುವಂಥ ಭ್ರಷ್ಟರನ್ನು ಇಲ್ಲಿ ಕಂಡಿದ್ದಾರೆ. 'ದೇಶದ ಭವಿಷ್ಯ' ಎಂಬ ಎರಡನೆಯ ಭಾಗದಲ್ಲಿ ನಿಜವಾದ ಜನಸೇವಕರ ಕೈಯಲ್ಲಿ ದೇಶದ ಭವಿಷ್ಯ ಸುರಕ್ಷಿತವಾಗಿದೆ ಎಂದು ಒಪ್ಪುತ್ತಾರೆ. ಜನ ಸೇವಕರು ನಡೆಸುವ ಹೋರಾಟದಲ್ಲಿ ಈ ಎಲ್ಲ ಅಸತ್ಯಗಳೂ ಮಣ್ಣುಪಾಲಾಗುತ್ತವೆ ಎಂದು ಅವರ ನಂಬಿಕೆ. ಅದಕ್ಕೇ ಡಾ. ನಾಥ್ ಅನ್ನುತ್ತಾರೆ "ದೇಶದ ಭವಿಷ್ಯ ನೇತಾರರು ಮತ್ತು ಮಂತ್ರಿಗಳ ಮುಷ್ಟಿಯಲ್ಲಿ ಇಲ್ಲ, ದೇಶದ ಜನಗಳ ಕೈಯಲ್ಲಿ ಇದೆ." 'ಝೂಠಾ-ಸಚ್' ಕಾದಂಬರಿಯಲ್ಲಿ ಯಶಪಾಲರು ಪರಿಸ್ಥಿತಿಗಳನ್ನು ಬಲು ಮಾರ್ಮಿಕವಾಗಿ ವಿವರಿಸುವಲ್ಲಿ ಹಾಗೂ ಪಾತ್ರ ಸೃಷ್ಟಿಯಲ್ಲಿ ಸರಿಸಾಟಿಯಿಲ್ಲದಂತೆ ಮಿಂಚಿದ್ದಾರೆ. ಅವರು ಮಾನವೀಯ ದೌರ್ಬಲ್ಯಗಳ ಜೊತೆ ಜೊತೆಗೆ ಸಂಘರ್ಷಗಳಲ್ಲಿ ಉಳಿದುಕೊಳ್ಳುವಂತಹ ಅವರ ಸಾಮರ್ಥ್ಯಗಳನ್ನು ಎತ್ತಿ ತೋರಿಸಿದ್ದಾರೆ. ಈ. ಚೆಲಿಶೇವ್ ಅವರು ಈ ಕೃತಿಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾ ಹೀಗೆಂದಿದ್ದಾರೆ "ಝೂಠಾ-ಸಚ್ ಆಧುನಿಕ ಭಾರತೀಯ ಇತಿಹಾಸದ ಮಹತ್ವಪೂರ್ಣ ದಶಕಗಳಲ್ಲಿ ಒಂದರ ಭಾರತೀಯ ಬುದ್ಧಿಜೀವಿಗಳ ಹಣೆಯ ಬರಹ ಮತ್ತು ಭಾರತೀಯ ಭವಿಷ್ಯದ ಯಥಾರ್ಥ ಚಿತ್ರ ಹಾಗೂ ಮಾರ್ಮಿಕವೂ ಎನಿಸಿದ ಕಥೆಯಾಗಿದೆ" (ಕ್ರಾಂತಿಕಾರಿ ಯಶಪಾಲ್, ಸಂ.

ಮಧುರೇಶ, ಪುಟ-೧೨೫).

ಯಶಪಾಲರು 'ಝೂಠಾ-ಸಚ್'ನ ತರುವಾಯ ಮೂರು ಕಾದಂಬರಿಗಳನ್ನು ಬರೆದರು. ಮೂರು ಕಥೆಗಳಲ್ಲೂ ಸಾಮೀಪ್ಯವಿದೆ. ಈ ಸಾಮೀಪ್ಯ ಅನುಭವ ಜನ್ಯವಾದದ್ದು. ಆರ್ಯಸಮಾಜದಲ್ಲಿದ್ದುಕೊಂಡು ಯಶಪಾಲರು ಮನುಷ್ಯನ ಬಾಳಿನಲ್ಲಿ ಲೈಂಗಿಕ ಸಂಬಂಧಗಳಿಗೆ ಇರುವ ಬಂಧನಗಳೆಂತವು ಎಂಬುದನ್ನು ಕಂಡಿದ್ದರು. ಈ ಬಂಧನಗಳು ಅವರ ಜೀವನಾನುಭವಕ್ಕೆ ಬಂದಂಥವುಗಳೇ. ಬಾಹ್ಯದಲ್ಲಿ ನಾವು ವಿಧಿಸಿಕೊಂಡ ಸಂಯಮವನ್ನು ಒಳಗಿನ ಒತ್ತಡಗಳು ಹೇಗೆ ಹರಿದೊಗೆಯುತ್ತವೆ ಎಂಬ ವಿಷಯ ಅವರ ಅರಿವಿಗೆ ಬಾರದಿರಲಿಲ್ಲ. 'ಪತಿವ್ರತಾ ಧರ್ಮ' ಅನ್ನುವುದೇನು ? ಎಂಬುದನ್ನು ಭಾರತೀಯ ಸಮಾಜದ ನೈತಿಕತೆಯ ಗುತ್ತಿಗೆ ಹಿಡಿದವರ ಬಾಯಲ್ಲಿ ಯಶಪಾಲರು ಪದೇ ಪದೇ ಕೇಳಿದ್ದರು.

ಮತ ಸಂಪ್ರದಾಯಗಳ ಮೂಲಕ ಹೆಣ್ಣಿನ ಮೇಲಾಗುವ ಹಿಂಸೆಯನ್ನು ಕಂಡಿದ್ದರು. ಹಾಗೆಯೇ ಪರದಾಸ್ಯದಲ್ಲಿರುವ ಸಮಾಜದಲ್ಲಿ ಹೆಣ್ಣಿನ ಸ್ವಾತಂತ್ರ್ಯವೆನ್ನುವುದು ಎಷ್ಟೊಂದು ಪದರಗಳ ಕೆಳಗೆ ಹೂತು ಹೋಗಿದೆ ಎಂಬುದನ್ನು ಅರಿತಿದ್ದರು. ಹೆಣ್ಣಿಗೆ ಎಷ್ಟೊಂದು ದಾಸ್ಯಗಳು ? ಯಶಪಾಲರು ಸ್ತ್ರೀಯ ಮುಕ್ತಿಗಾಗಿ ಅವಳನ್ನು ನಿರ್ಭಯಳಷ್ಟೇ ಅಲ್ಲ, ನಾಚಿಕೆಗೆಟ್ಟವಳನ್ನಾಗಿಸಿದರು. ಅತಿರೇಕವೆನ್ನುವಷ್ಟು ಮಟ್ಟಿಗೆ ಪತಿವ್ರತಾಧರ್ಮವನ್ನು ಖಂಡಿಸಿ ತಮ್ಮ ಕೃತಿಗಳ ಮೂಲಕ ಹೆಣ್ಣಿಗೆ ಉಪಯುಕ್ತ ವಾತಾವರಣ ಕಲ್ಪಿಸಿ ಸಾಹಸ ನೀಡಿದರು. ಇದಕ್ಕಾಗಿ ಯಶಪಾಲರ ಮೇಲೆ ಆರೋಪಗಳು ಬಂದವು. ಅದಕ್ಕೆ ಅವರು 'ಜನಗಳು ಅರ್ಥ ಮಾಡಿಕೊಂಡಿಲ್ಲ' ಎಂದು ಉತ್ತರಿಸಿದರು. 'ಬಾರಹ್ ಘಂಟೇ', 'ಅಪ್ಸರಾ ಕಾ ಶಾಪ್' ಮತ್ತು 'ಕ್ಯೂಂ ಫಂಸೇ' ಇವೆಲ್ಲ ಕಾದಂಬರಿಗಳು ಯಶಪಾಲರ ಮಿಗಿಲೆನಿಸುವಷ್ಟರ ಮಟ್ಟಿನ ಆತ್ಮವಿಶ್ವಾಸಪೂರ್ಣ ದೃಷ್ಟಿಗೆ ಪುರಾವೆಗಳು.

'ಬಾರಹ್ ಘಂಟೇ'ಯಲ್ಲಿ ಕ್ರಿಸ್ತ ಧರ್ಮಕ್ಕೆ ಸೇರಿದ ಭಾರತೀಯ ಮಹಿಳೆಯೊಬ್ಬಳ ಕಥೆ ಇದೆ. ಅವಳ ಹೆಸರು ಬಿನೀ. ಅವಳ ಗಂಡ ಸತ್ತಾಗ ಅವಳು ಅನಾಥಳಾದಳು. ಹೊರಗಡೆಯ ಪ್ರಪಂಚ ಅವಳಿಗೆ ಸ್ಪೃಶ್ಯವಲ್ಲ. ಸಾಮಾಜಿಕ ನಿಯಮಗಳು ಅವಳನ್ನು ಜಗತ್ತಿನಿಂದ ವಿರಕ್ತಳಾಗಿಸಿದೆ. ಗಂಡ ರೋಮಿಯ ನೆನಪೇ ಅವಳಿಗೆ ಜೀವನ. ಗ್ಲಾನಿಯ ಕಾರಣ ಆತ್ಮಹತ್ಯೆಯ ವಿಚಾರವೂ ಅವಳಲ್ಲಿ ಏಳುತ್ತದೆ. ಒಮ್ಮೆ ಗಂಡನ ಸಮಾಧಿಗೆ ಹೂ ಇಡಲು ಹೋದಾಗ ಫ್ಯಾಂಟಮ್ ಎಂಬುವನನ್ನು ಸಂಧಿಸುತ್ತಾಳೆ. ಅವನು ವಿಧುರ. ಇಬ್ಬರೂ ತಮ್ಮ ದುಃಖಗಳನ್ನು ಹಂಚಿಕೊಳ್ಳುತ್ತಾರೆ. ಮಳೆ ಬಂದ ಕಾರಣ ಒಂದೇ ರಿಕ್ಷಾದಲ್ಲಿ ಅಲ್ಲಿಂದ ಹೊರಬೀಳುತ್ತಾರೆ. 'ಬಿನಿ' ಮನೆಗೆ ಬರುವ ಬದಲು ಫ್ಯಾಂಟಮ್‌ನ ಜೊತೆ ರೆಸ್ಟೋರೆಂಟ್‌ಗೆ ಹೋಗುತ್ತಾಳೆ. ಅಲ್ಲಿಂದ ಅವನ ಮನೆಗೆ ಹೋಗುತ್ತಾಳೆ. ಅಲ್ಲಿ

ಇಬ್ಬರೂ ಬಾಳ ಸಂಗಾತಿಗಳಾಗುತ್ತಾರೆ. ಬಿನಿಯ ಸೋದರಿ 'ಜೈನಿ'ಗೆ ಇದು ಹಿಡಿಸುವುದಿಲ್ಲ. ಆದರೆ ಅವಳ ಗಂಡ ಪಾವುರ್ ಮತ್ತು ಅವನ ಗೆಳೆಯ ಲಾರೆನ್ಸ್, ಬಿನಿಯ ಈ ಸಾಹಸವನ್ನು ಸ್ವಾಗತಿಸುತ್ತಾರೆ. ಬಿನಿ ಮತ್ತು ಫ್ಯಾಂಟಮ್ ಅವರ ಒಳಗಿನ ನೋವನ್ನು ಅರಿತುಕೊಂಡು ಅವರಿಗೆ ಮುಕ್ತಿ ನೀಡುವ ಮನೋವೈಜ್ಞಾನಿಕ ಪ್ರಯತ್ನ ಈ ಕಾದಂಬರಿಯಲ್ಲಿ ನಡೆದಿದೆ.

ಇದೇ ಶೃಂಖಲೆಯಲ್ಲಿ ಅಭಿಜ್ಞಾನ ಶಾಕುಂತಲದ ಕಥೆಯನ್ನು ಆಧರಿಸಿ 'ಅಪ್ಸರಾ ಕಾ ಶಾಪ್' ಬರೆಯಲಾಗಿದೆ. ಈ ಕಾದಂಬರಿಯಲ್ಲಿ ಹೆಣ್ಣಿನ ವ್ಯಕ್ತಿತ್ವವನ್ನು ಅರಿಸಿ ನೋಡಲಾಗಿದೆ. ದುಷ್ಯಂತ ಶಕುಂತಲೆಯನ್ನು ಮರೆಯುತ್ತಾನೆ. ಶಕುಂತಲೆ ಅಪಮಾನಿತಳಾಗುತ್ತಾಳೆ. ದುಷ್ಯಂತನಿಂದ ದೂರವಾಗೆಂದು ಶಕುಂತಲೆಗೆ ಮೇನಕೆ ಹೇಳುತ್ತಾಳೆ. ಏಕೆಂದರೆ ಯಾವ ಗಂಡು ಅವಳನ್ನು ಅಪಮಾನಿಸಿದ್ದನೋ ಅವನೊಡನೆ ಸದಾ ಕಾಲಕ್ಕೂ ಬಾಳಿಕೊಂಡಿರುವುದು ಹೇಡಿತನವಾಗುತ್ತದೆ. ಶಕುಂತಲೆ ಅವಳ ಅಣತಿಗೆ ಮನ್ನಣೆ ನೀಡುವುದಿಲ್ಲ. ಅವಳು ದುಷ್ಯಂತನನ್ನು ಗಂಡನ ರೂಪದಲ್ಲಿ ಅಸ್ವೀಕಾರ ಮಾಡಲು ಸಿದ್ಧಳಿಲ್ಲ. ಆಗ ಮೇನಕೆ ನೀನು ಪರೋಪಜೀವಿಯಾಗು ಎಂದು ಶಾಪ ಕೊಡುತ್ತಾಳೆ. ಇದರ ಪರಿಣಾಮವಾಗಿಯೇ ಶಕುಂತಲೆಯ ಪರಂಪರೆಯಲ್ಲಿ ಭಾರತೀಯ ನಾರಿ ಇಂದಿಗೂ ಆ ಶಾಪವನ್ನು ಧಾರಣ ಮಾಡಿಕೊಂಡಿದ್ದಾಳೆ. ಇದೇ 'ಅಪ್ಸರೆಯ ಶಾಪ'. ಇಲ್ಲಿನ ಮೇನಕೆ ಲೇಖಕರ ವಿಚಾರಗಳನ್ನೇ ಸಂವಹಿಸುತ್ತಾಳೆ. ಅವರ ಪ್ರಕಾರ ಅನೇಕ ಸಮಾಜಗಳಲ್ಲಿ ಗಂಡು ಸ್ವಾರ್ಥದ ಅಮಲಿನಲ್ಲಿ ನಾರಿಯನ್ನು ತನ್ನ ನಿರಂಕುಶ ಭೋಗದ ವಸ್ತುವಾಗಿಸಿ ಉಳಿಸಿಕೊಳ್ಳಲು ಅವಳನ್ನು ತನ್ನ ಒಡೆತನಕ್ಕೆ ಸೇರಿದ ಪಶುಧನದ ಹಾಗೆ ಅಧಿಕಾರವಿಹೀನಳನ್ನಾಗಿಸಿದ್ದಾನೆ. ಗಂಡು ನಾರಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಅವಳ ನಾರೀತ್ವ ಮತ್ತು ವ್ಯಕ್ತಿತ್ವವನ್ನು ಪಾತಿವ್ರತ್ಯದ ನಂಬುಗೆಗಳಿಂದ ಕಟ್ಟಿ ಅವಳನ್ನು ಕೇವಲ ಹೆಂಡತಿಯಾಗಿಸಿದ್ದಾನೆ. ಪತಿ ಪತ್ನಿಯರ ಸಂಬಂಧದಲ್ಲಿರಬೇಕಾದ ಏಕನಿಷ್ಠೆಯ ಧರ್ಮವನ್ನು ಪತ್ನಿಗಷ್ಟೇ ಆರೋಪಿಸಿ ತಾನು ಒಡೆಯನಾಗಿ ಪತ್ನಿಯನ್ನು ಅಧೀನಳಾಗಿಸಿದ್ದಾನೆ (ಅಪ್ಸರಾ ಕಾ ಶಾಪ್, ಪುಟ-೧೦೭). ಕಾದಂಬರಿಯಲ್ಲಿ ದುಷ್ಯಂತನ ಪಾತ್ರದಲ್ಲಿದ್ದ 'ಧೀರೋದಾತ್ತತೆ'ಯನ್ನು ಕಳಚಿಬಿಟ್ಟಿದ್ದಾರೆ. ಲೇಖಕರು ತಮ್ಮ ನಿವೇದನೆಯಲ್ಲಿ ಹೀಗೆಂದಿದ್ದಾರೆ "ಈ ಯುಗದಲ್ಲಿ ಪಾತಿವ್ರತ್ಯದ ಹೆಸರಿನಲ್ಲಿ ಶಕುಂತಲೆಯಂಥ ನಾರಿಯ ತುಳಿತಕ್ಕೆ ಹೊಣೆಗಾರನಾದ ವ್ಯಕ್ತಿಗೆ ಅಲೌಕಿಕವಾದ ಶಕ್ತಿಗಳನ್ನು ಆರೋಪಿಸಿ ಧೀರೋದಾತ್ತ ಮತ್ತು ದೋಷರಹಿತನೆಂದು ಒಪ್ಪಿಕೊಳ್ಳಲಾದೀತೇ. (ಅದೇ, ಪುಟ-೧೩೧).

'ಕ್ಯೂಂ ಫಂಸೇ' ಕಾದಂಬರಿಯ ಕಥೆಯು ಸ್ವಲ್ಪ ಹೆಚ್ಚುಕಡಿಮೆ ಇಂತ ವಸ್ತುವನ್ನು ಕೇಂದ್ರವಾಗಿ ಹೊಂದಿದೆ. ಯಶಪಾಲರು 'ಸಂಭೋಗ ಕ್ರಿಯೆ'

ಸ್ವಾಭಾವಿಕ ಪ್ರವೃತ್ತಿಯೆಂದು ಒಪ್ಪಿಕೊಂಡು ಈ ಕಾರಣ ಅದನ್ನು ಹತ್ತಿಕ್ಕುವುದು ಸಲ್ಲ ಎನ್ನುತ್ತಾರೆ. ಈ ಕಾದಂಬರಿಯ ಪ್ರಮುಖ ಪಾತ್ರಗಳು ಭಾಸ್ಕರ್, ಮೋತಿ, ಹೇನಾ ಮತ್ತು ಮಿಸ್ ಡಾಕ್ಟರ್. ಭಾಸ್ಕರ್ ಯುವಕ, ಅವನು ವಿವಾಹ ಬಂಧನದಲ್ಲಾಗಲಿ, ಮನೆವಾರಿನ ವ್ಯವಸ್ಥೆಯಲ್ಲಾಗಲಿ ಆಸಕ್ತಿ ಇಲ್ಲದವನು. ಅವನಿಗೆ ಇರುವ ಇಚ್ಛೆಯೆಲ್ಲಾ ಸುಂದರ ಹೆಣ್ಣಿನ ಸಹವಾಸ. ಮೋತಿ ಯುವತಿ. ಅವಳಿಗೆ ತನ್ನ ದಾಂಪತ್ಯದಲ್ಲಿ ಸುಖವಿಲ್ಲ. ಅವಳು ಭಾಸ್ಕರನಿಗೆ ಸಮೀಪವಾಗುತ್ತಾಳೆ. ಆದರೆ ಇಬ್ಬರಲ್ಲೂ ಶರೀರ ಸಂಬಂಧದ ಸುಖ ಏರ್ಪಡುವುದಿಲ್ಲ. ಭಾಸ್ಕರನಿಗೆ ಮೋತಿಯಲ್ಲಿರುವ ಸ್ತ್ರೀ ಸಹಜ ಸಂಕೋಚ ಮತ್ತು ನಾಚಿಕೆ ಸರಿ ಬರುವುದಿಲ್ಲ. ಭಾಸ್ಕರ ಬಹುಮಟ್ಟಿಗೆ 'ಕಾಲ್‌ಗರ್ಲ್' ಆಗಿರುವ ಹೇನಾ ಎಂಬುವಳ ಸಹವಾಸ ಮಾಡುತ್ತಾನೆ. ಉನ್ಮುಕ್ತ ಕಾಮಕೇಳಿಯಲ್ಲಿ ಪ್ರವೀಣಳೆನಿಸಿದ ಹೇನಾ ಭಾಸ್ಕರನಿಗೆ ಸಂಪೂರ್ಣ ತೃಪ್ತಿ ನೀಡುತ್ತಾಳೆ. ಮೋತಿ ಅವಳನ್ನು ತಾನಾಗಿ ಮಗ್ಗಲಿಗೆ ಬರುವ ನಾಚಿಕೆಗೆಟ್ಟವಳು ಎಂದು ಹೀಯಾಳಿಸುತ್ತಾಳೆ. ಮತ್ತು ಅವಳ ಮೇಲಿನ ಹೊಟ್ಟೆಕಿಚ್ಚಿನಿಂದ ಭಾಸ್ಕರನಿಗೆ ಸಂಪೂರ್ಣವಾಗಿ ಶರಣಾಗುತ್ತಾಳೆ. ಭಾಸ್ಕರ ಮತ್ತೆ ಅವಳನ್ನು ಬಿಡುತ್ತಾನೆ. ಅವಳನ್ನು ಧಿಕ್ಕರಿಸುತ್ತಾನೆ. ಅವಳ ಸಂಪರ್ಕದಿಂದ ದೂರ ಉಳಿಯುತ್ತಾನೆ. ಈಗ ಭಾಸ್ಕರನ ಜೀವನದಲ್ಲಿ ಮೂರನೆಯ ಯುವತಿಯೊಬ್ಬಳು ಕಾಣಿಸಿಕೊಳ್ಳುತ್ತಾಳೆ. ಅವಳೇ ಮಿಸ್ ಡಾಕ್ಟರ್. ಆದರೆ ಅವನಿಗೆ ಸಮರ್ಪಿತವಾಗುವ ಮುನ್ನ ಮದುವೆ ಮಾಡಿಕೊಳ್ಳಬೇಕೆನ್ನುತ್ತಾಳೆ. ಈ ಮೂರೂ ಪ್ರಸಂಗಗಳು, ಪ್ರೇಮ ಸಂದರ್ಭದಲ್ಲಿ ನೈತಿಕತೆ, ಒಡೆತನದ ಶರತ್ತು ಮತ್ತು ಏಕಾಧಿಪತ್ಯವನ್ನು ಹೊಂದುವ ಅಭಿಲಾಷೆ ನಿರರ್ಥಕವೆಂಬ ಲೇಖಕರ ನಂಬಿಕೆಗೆ ಉದಾಹರಣೆಗಳು. ಈ ಕಾದಂಬರಿಯ ಕೊನೆಯಲ್ಲಿ ಭಾಸ್ಕರನ ನೆಪದಲ್ಲಿ ಲೇಖಕರು ಹೀಗೆಂದು ನಿರ್ಣಯಿಸಿಕೊಳ್ಳುತ್ತಾರೆ:"ನಾರಿಯನ್ನು ಸದಾ ಕಾಲ ತನ್ನ ಸಂಪತ್ತೆಂದು ಅಥವಾ ಭೋಗದ ವಸ್ತುವೆಂದು ತಿಳಿಯುವುದು ನಾರಿಯ ಬಗ್ಗೆ ಪುರುಷನ ಹೀನ ವಿಚಾರ. ಮಿಥ್ಯಾ ಅಹಂಕಾರ ಹಾಗೂ ಅನ್ಯಾಯವಲ್ಲದೆ ಇನ್ನೇನು ? ಆತ್ಮವಿಶ್ವಾಸವುಳ್ಳ ಮತ್ತು ಬೇರೆಯವರನ್ನು ಅವಲಂಬಿಸದ ನರ-ನಾರಿಯರು ಗಾಳ ಹಾಕಬೇಕೇಕೆ ? ಗಾಳಕ್ಕೆ ಸಿಕ್ಕಬೇಕೇಕೆ ?"

ಯಶಪಾಲರ ಕಡೆ ಕಾದಂಬರಿ 'ಮೇರಿ-ತೇರಿ ಉಸ್ ಕೀ ಬಾತ್'. ಬಹುವಾಗಿ ಚರ್ಚಿಸಿಕೊಂಡ ಮತ್ತು ಸಾಹಿತ್ಯ ಅಕಾದೆಮಿಯಿಂದ ಬಹುಮಾನ ಪಡೆದ ಕೃತಿ. ಆಕಾರದ ದೃಷ್ಟಿಯಲ್ಲಿ ಇದು ೭೬೧ ಪುಟಗಳ ಕಾದಂಬರಿ. ಸುಮಾರಾಗಿ 'ಝೂಠಾ-ಸಚ್'ನಷ್ಟೇ ದೊಡ್ಡದು. ಮೊದಲಿನ ಕಾದಂಬರಿಗಳಂತೆ ಇದರ ಕಥಾವಸ್ತುವು ರಾಜನೈತಿಕವೇ, ಇಲ್ಲಿ ಸ್ತ್ರೀ ಪುರುಷ ಸಂಬಂಧಗಳನ್ನು ಕುರಿತಾದದ್ದೇ. ರಾಜಕೀಯ ಎಂದರೆ ೧೯೪೨ರ ಘಟನೆಗಳೇ ಹೊಸ ಸಂದರ್ಭದಲ್ಲಿ ಮತ್ತೆ

ಬಂದಿವೆ. ಯಶಪಾಲರು ಆ ಕಾಲಕ್ಕೆ ಮತ್ತೆ ಬೆಲೆ ಕಟ್ಟಲು ನೋಡಿದ್ದಾರೆ. ಸ್ವಾತಂತ್ರ್ಯದ ತರುವಾಯದ ರಾಜಕೀಯದ ಎಲ್ಲ ಕಪ್ಪು ಮುಖಗಳೊಳಗಿನಿಂದ ಬೆಳಕಿನ ರೇಖೆಗಳನ್ನು ಗುರ್ತಿಸಲು ಸಾಧ್ಯವೇ ಎಂದು ಪ್ರಯತ್ನಿಸಿದ್ದಾರೆ. ಕಾದಂಬರಿಯ ಆಕಾರ ದೊಡ್ಡದು. ಕಥೆ ನಿಧಾನವಾಗಿ ಚಲಿಸುತ್ತದೆ. ಇದಕ್ಕೆ ಕಾರಣವನ್ನು ಸ್ವಾತಂತ್ರ್ಯದ ನಂತರದ ಇತಿಹಾಸದಲ್ಲಿ ಹುಡುಕುತ್ತಾರೆ. ಮುಖ್ಯ ಪಾತ್ರಗಳು ಸೇಠ್ ಅಮರನಾಥ್ ಮತ್ತು ಉಷಾ, ಮೊದಲು ಹತ್ತಿರ ಬಂದು ನಂತರ ದೂರಾಗುತ್ತಾರೆ. ಅಮರ್ ಜೈಲಿಗೆ ಹೋಗುತ್ತಾನೆ. ಉಷಾ ವಿದ್ಯಾರ್ಥಿಗಳ ಮುಂದಾಳಾಗುತ್ತಾಳೆ. ಅವಳು ಬಹಳ ರೋಮ್ಯಾಂಟಿಕ್. ತನ್ನ ಭಾಷಣಗಳ ಮೂಲಕ ಜನಗಳಲ್ಲಿ ಉತ್ಸಾಹ ತುಂಬುತ್ತಾಳೆ. ಮುಂಬಯಿಯಲ್ಲೂ ಉಷಾ ಮತ್ತು ಪಾಠಕ್ ವೇಷ ಮರೆಸಿಕೊಂಡು ಒಟ್ಟಿಗಿರುತ್ತಾರೆ. ಈ ಇರುವಿಕೆಯಲ್ಲಿ ರಾಜಕೀಯ ಇದೆ-ರೋಮಾನ್ಸ್ ಇದೆ. ಬಲಿಯಾ ಪ್ರದೇಶದ ಪೊಲೀಸ್ ಸ್ಟೇಷನ್‌ಗಳು ಮತ್ತು ಕಚೇರಿಗಳನ್ನು ವಶಪಡಿಸಿಕೊಳ್ಳುವ ಸಂಬಂಧವಾದ ವಿವರಣೆಗಳು ಬಹು ವಿಸ್ತಾರವಾಗಿವೆ. ಸೇಠ್, ಉಷಾ, ಪಾಠಕ್, ನರೇಂದ್ರ್, ರಜಾ ಮತ್ತು ಇನ್ನು ಅನೇಕರು ರಾಜಕೀಯ ಪ್ರಕರಣಗಳನ್ನೆತ್ತಿಕೊಂಡು ಬಹುವಾಗಿ ಚರ್ಚಿಸಿಗಿಳಿಯುತ್ತಾರೆ. ಈ ಚರ್ಚೆಗಳು ಉದ್ದುದ್ದವಾಗಿ ಬೆಳೆದಿವೆ. ಬಿರಜುವು ಹುತಾತ್ಮನಾಗುವ ಪ್ರಸಂಗ ಹೆಚ್ಚು ಪರಿಣಾಮಕಾರಿಯಾಗಿದೆ. ಲೇಖಕರು ಆಗ್ಗ ನಡೆಯುತ್ತಿದ್ದ ಮತೀಯ ಕಲಹಗಳನ್ನು ಸದ್ಭಾವಕ್ಕೆ ಬದಲಿಸಲು ಬಯಸುತ್ತಾರೆ. ಹೀಗಾಗಿ ಬಹು ಪರಿಣಾಮಕಾರಿ ಭಾಷಣಗಳನ್ನು ಮಾಡಿಸಿದ್ದಾರೆ. ಕಾದಂಬರಿಯಲ್ಲಿ ಶೂಜಾ ಅಹಮದ್‌ನ ಸಾಹಸಿಕ ಕಥೆಯ ಉದ್ದೇಶವೂ ಇದೇ. ಉಷಾ ಕೂಡಾ ತಲೆಮರೆಸಿಕೊಂಡು ಇದೇ ಕೆಲಸವನ್ನು ಮಾಡುತ್ತಾಳೆ. ಲೇಖಕರು ಎಲ್ಲ ಸಮಸ್ಯೆಗಳನ್ನು ಬೇರೆ ಬೇರೆಯಾಗಿ ಎತ್ತಿಕೊಳ್ಳುತ್ತಾರೆ. ಅವನ್ನು ಮೂಲೆಗೊತ್ತಿ ಪರೀಕ್ಷಿಸುತ್ತಾರೆ. ಮತ್ತೆ ಅವೆನ್ನೆಲ್ಲಾ ಒಂದೂ ತೀವ್ರ ಚಟುವಟಿಕೆಯನ್ನಾಗಿ ಪರಿವರ್ತಿಸುವ ಶಿಥಿಲ ಪ್ರಯತ್ನ ಮಾಡುತ್ತಾರೆ. ರಜಾ, ನರೇಂದ್ರ ಮತ್ತು ಪಾಠಕ್ ಇವರ ಕ್ರಾಂತಿಕಾರರ ವಿಚಾರಗಳ ಪ್ರಭಾವದಿಂದ ಹರಿ ಭೈಯಾ, ಮಾಯಾ ಗೋರಿ, ಗಂಗಾ ಬುವಾ, ಪಂಡಿತ ಪರಿವಾರಿ ಇವರೆಲ್ಲಾ ತಮ್ಮ ಪರಿವೇಶದಲ್ಲೇ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದನ್ನು ಕಂಡಾಗ, ಸ್ಥಿತಿಯಲ್ಲಿ ಕಂಪನ ಉಂಟಾಗಿ ಸ್ಫೋಟಗೊಳ್ಳುವುದೇನೋ ಅನಿಸುತ್ತದೆ. ಇಲ್ಲಿ ವ್ಯಕ್ತಿಗತ ಪಾತ್ರಗಳು ಕುಟುಂಬ, ಸಮಾಜ ಮತ್ತು ರಾಷ್ಟ್ರೀಯ ಪರಿಸ್ಥಿತಿಗಳೊಡನೆ ಬೆಸುಗೆಗೊಳ್ಳುತ್ತವೆ. ಸ್ವಂತದ ಪ್ರೇಮಾಭಿಲಾಷೆಗಳು ಮತ್ತು ಸಮಾಜದ ಮುಕ್ತಿಗಾಗಿ ನಡೆದ ಪ್ರಯತ್ನಗಳಲ್ಲಿ ಮೂಲಭೂತವಾದ ಭೇದ ಉಳಿಯುವುದೇ ಇಲ್ಲ. ಪ್ರೇಮಾಕಾಂಕ್ಷೆ ವ್ಯಕ್ತಿಯನ್ನು ಸಮಾಜದಿಂದ ದೂರವಾಗಿಸುವುದಿಲ್ಲ. ಈ ಇಚ್ಛೆಗಳಿಗೂ ರಚನಾತ್ಮಕವಾದ ಮಹತ್ವವಿದೆ. ಇವು ವ್ಯಾಪಕ ಸಂದರ್ಭಗಳಲ್ಲಿ ಬಿಚ್ಚಿಕೊಳ್ಳಲು ಹಾಗೂ ಕೀಳರಿಮೆಯಿಂದ ಬಿಡಿಸಿಕೊಂಡು ವ್ಯಾಪಕವಾದ ಆಯಾಮದಲ್ಲಿ

ಸೇರಿಕೊಳ್ಳಲೆಂದೇ ಇವೆ ಯಶಪಾಲರ ಈ ಎಲ್ಲ ಆಕಾಂಕ್ಷೆಗಳು ರಾಜಕೀಯ ಚಟುವಟಿಕೆಗಳವರೆಗೆ ಸೀಮಿತಗೊಂಡಿವೆ. ಉಷಾ ಮತ್ತು ಪಾಠಕರ ಪಾತ್ರಗಳಲ್ಲಿ ಇದನ್ನೇ ಕಾಣುತ್ತೇವೆ. ಅಮರನಾಥನ ಮನಸ್ಸಿನಲ್ಲಿ ಬೇರೆಯವೇ ವಿಚಾರಗಳಿದ್ದು ಕೀಳರಿಮೆಯೂ ಕಾರಣ ದುರಂತಕ್ಕೆ ಕಾರಣನಾಗುತ್ತಾನೆ. ಸ್ತ್ರೀ-ಪುರುಷ ಸಂಬಂಧಗಳನ್ನಷ್ಟೇ ಈ ಕಾದಂಬರಿಯ ಕೇಂದ್ರವಸ್ತುವಾಗಿ ಕಾಣುವುದು ತಪ್ಪಾಗುತ್ತದೆ. ಧನಂಜಯ್ ವರ್ಮಾ ಅವರೆನ್ನುವುದು ಸರಿ ಕಾಣುತ್ತದೆ - "ಮೇರಿ-ತೇರೀ-ಉಸ್ ಕೀ ಬಾತ್'ನ ಸಮಸ್ಯೆ ಕೇಂದ್ರಬಿಂದು ಸ್ತ್ರೀ-ಪುರುಷ ಸಂಬಂಧಗಳನ್ನು ಕುರಿತದ್ದು ಹಾಗೂ ಲೇಖಕರು ಚಿಂದಿಯಾಗಿರುವ ಕಂದಾಚಾರದ ಸಂಬಂಧಗಳ ಸ್ವರೂಪಗಳನ್ನು ಬಿಡಿಸಿಟ್ಟು ಆರೋಗ್ಯಕರವೆನಿಸುವ ಸ್ವರೂಪಗಳತ್ತ ಸನ್ನೆ ಮಾಡಿ ತೋರಿಸುತ್ತಾರೆ ಎಂದು ತಿಳಿಯುವ ಜನರು ಯಾವುದೇ ಕೃತಿಯನ್ನು ಗಂಭೀರವಾಗಿ ಓದದೇ ವಿರೂಪಗೊಳಿಸುವ ತೆರದಲ್ಲಿ ಸರಳೀಕರಿಸಿಕೊಂಡು ಬರುವ ತಮ್ಮ ಹವ್ಯಾಸವನ್ನು ಬಿಡಬೇಕು" (ಕ್ರಾಂತಿಕಾರೀ ಯಶಪಾಲ್, ಸಂ. ಮಧುರೇಶ, ಪುಟ-೪೫).

ಕಾದಂಬರಿಯ ಮುಕ್ತಾಯಕ್ಕೆ ಉಷಾ ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ತೊಡಗಿ ಪಾಠಕನ ಜೊತೆ ನಡೆಯಬೇಕಾಗಿದ್ದ ಮರುವಿವಾಹವನ್ನು ನಿಲ್ಲಿಸುತ್ತಾಳೆ. ಈಗಾಗಲೇ ಅವಳಿಗೊಬ್ಬ 'ಪಪ್ಪು' ಇದ್ದಾನೆ. ತನ್ನ ಅಮ್ಮ ಬೇರೊಬ್ಬನನ್ನು ತನ್ನ ಅಪ್ಪನಾಗಿಸಿಕೊಳ್ಳಲು ಹವಣಿಸುತ್ತಿದ್ದಾಳೆಂಬ ಕೀಳರಿಮೆಯ ಭಾವನೆ ಆ ಮಗುವಿನಲ್ಲಿ ನೆಲೆ ಮಾಡಿಕೊಂಡಿದೆ. ಇದರ ಅರಿವಿನಿಂದಾಗಿ ಉಷಾಳ ಮನಸ್ಸಿಗೆ ನೋವಾಗುತ್ತದೆ. ಅವಳು ಭಾವುಕಳಾಗುತ್ತಾಳೆ. ಮೊದಲು ಮಗುವಿನ ಮನಸ್ಸನ್ನು ಹದಗೊಳಿಸಬೇಕೆಂದು ತೀರ್ಮಾನ ಕೈಗೊಳ್ಳುತ್ತಾಳೆ. ವಿಮರ್ಶಕರು ಇದನ್ನು ಪಲಾಯನವೆಂದಾಗ ಯಶಪಾಲರು ಉತ್ತರಿಸಿದ್ದಾರೆ "ಈಗಿನ ಸ್ಥಿತಿಯ ವ್ಯಾವಹಾರಿಕ ಪಕ್ಷ ಏನಾಗಬೇಕೆಂದರೆ, ಉಷಾಳ ಮೇಲೆ ಮಗನ ಮನಸ್ಸಿನ ಸಂಸ್ಕಾರಗಳಿಗೆ ಒಂದು ತಿರುವನ್ನು ನೀಡಬೇಕಾದ ಹಿರಿಯ ಹೊಣೆಗಾರಿಕೆ ಇದೆ. ಮಗನ ಬಗ್ಗೆ ಜವಾಬ್ದಾರಿಯಿಂದ ವರ್ತಿಸಬೇಕು. ಪಾಠಕನೊಡನೆ ಸಾನ್ನಿಧ್ಯವನ್ನು ಹೊಂದಿರಬೇಕು. ಹೀಗೆ ಇವೆರಡರಲ್ಲಿ ಸಮನ್ವಯ ಇರಬೇಕಾದ ಅವಶ್ಯಕತೆಯೇ ಉಷಾ ಹಾಗೂ ಪಾಠಕರ ಸಂಬಂಧ ಅಥವಾ ಸಾನ್ನಿಧ್ಯವನ್ನು ಸಹಜವಾದ ಅಧಿಕಾರವಾಗಿಸಿಬಿಡುತ್ತದೆ" (ಯಶಪಾಲ್ ಕೇ ಪತ್ರ, ಸಂ. ಮಧುರೇಶ ಪುಟ-೧೧೦).

ಕಥೆಗಳ ಈ ತೆರನಾದ ಕೊನೆಗಳು ಯಶಪಾಲರ ವಿಕಸಿತ ವಿಚಾರಗಳ ಪ್ರತೀಕವಾಗಿ ನಿಲ್ಲುತ್ತವೆ. ಈಗ ಅವರಲ್ಲಿ ೧೯೪೦ರ ನಿಲವುಗಳು ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

# ಪ್ರವಾಸ ಸಾಹಿತ್ಯ

ಪ್ರವಾಸ ಮತ್ತು ಆದಿಮಾನವನ ಸಾಮ್ಯವಾದಿ ವ್ಯವಸ್ಥೆ ಇವೆರಡರ ನಡುವೆ ಆಳವಾದ ಸಂಬಂಧವಿದೆ. ಬುದ್ಧಿಶಕ್ತಿ ವಿಕಾಸಗೊಳ್ಳುವುದಕ್ಕೆ ಮುನ್ನವೂ ಪೂರ್ವಜರು ಅಲೆಮಾರಿಗಳಾಗಿಯೇ ಇದ್ದರು. ಈ ಅಲೆಮಾರಿತನದ ಕಾರಣದಿಂದಲೇ ಅವರ ಹಾಗೂ ನಿಸರ್ಗದ ನಡುವೆ ಸಂಬಂಧಗಳು ಚಿಗುರೊಡೆದವು. ಆಶೆಗಳು, ಪ್ರಯತ್ನಗಳು ಹಾಗೂ ಸಾಮರ್ಥ್ಯ ಈ ತೆರನಾದ ಕ್ರಮ ಮಾನವನು ನಿಸರ್ಗದ ಜೊತೆ ಸಹಚರಿಸಿದ್ದರಿಂದಲೇ ಸಾಧ್ಯವಾಯಿತು. ಕಾಡುಮನುಷ್ಯನ ಸ್ಥಿತಿಯಿಂದ ಮನುಷ್ಯನವರೆಗಿನ ಪರಿವರ್ತನೆಯನ್ನು ತಂದದ್ದು ಪ್ರವಾಸಗಳೇ. ಅದರ ನಂತರವೇ ಬರ್ಬರವೆನಿಸುವ ಮಾನವ ಸಮಾಜ ರೂಪುಗೊಂಡದ್ದು; ಸಂಪತ್ತಿನ ಮೇಲೆ ವ್ಯಕ್ತಿಗತ ಅಧಿಕಾರ ಏರ್ಪಟ್ಟಿತು. ವರ್ಗ ಭೇದಗಳು ಉಂಟಾದವು. ಹೀಗೆ ಮನುಷ್ಯನನ್ನು ಎಲ್ಲ ರೀತಿಯ ಸಂಕೀರ್ಣತೆಗಳು ಬಿಗಿಸಿಬಿಟ್ಟವು. ಸ್ವಚ್ಛಂದ ಪ್ರಪಂಚದಿಂದ ಸಂಕುಚಿತ ಜಗತ್ತಿನ ವರೆಗಿನ ಪಯಣ ಮತ್ತು ಅದರಿಂದ ಹೊರಬಂದು ಮತ್ತೆ ಸಾಮ್ಯವಾದಿ ಸೃಷ್ಟಿಯತ್ತ ಪಯಣಿಸುವಲ್ಲಿ ಇತಿಹಾಸ ಎಷ್ಟೋ ಬಾರಿ ಮಗ್ಗಲು ಬದಲಿಸಿದೆ. ವಾಸ್ತವತೆಯನ್ನು ಉಳಿಸಿಕೊಂಡು ಬರಲು ಜಗತ್ತಿನೊಂದಿಗೆ ಸಂಪರ್ಕ ಹೊಂದಿರಬೇಕಾದದ್ದು ಅನಿವಾರ್ಯ ಹಾಗೂ ಈ ರೀತಿಯ ಸಂಪರ್ಕಕ್ಕೆ ಪ್ರವಾಸಗಳು ಅನಿವಾರ್ಯ. ಪ್ರವಾಸ ನೀಡುತ್ತದೆ ಪ್ರತ್ಯಕ್ಷತೆಯ ಅರಿವನ್ನು ಪ್ರಮಾಣೀಕರಿಸಿಕೊಳ್ಳುವಾಗ ಅನೇಕ ಸಂಶಯಗಳು ಹುಟ್ಟಿಕೊಳ್ಳುವ ಸಾಧ್ಯತೆ ಇದೆ.

ಜನವಾದಿ ಲೇಖಕನೆನಿಸಿಕೊಂಡವನಿಗೆ ಇಂದು ಪ್ರಾಮಾಣಿಕವಾದ ಅನುಭವವೇ ಮೂಲ ಆಧಾರವಾಗಿದೆ. ಹೀಗಾಗಿ ಪ್ರವಾಸಗಳು ಅತ್ಯಗತ್ಯವಾಗಿ ಬಿಡುತ್ತದೆ. ಪ್ರಪಂಚದ ಬಹುಪಾಲು ಲೇಖಕರು ಪ್ರವಾಸಿಗಳೇ. ರಾಹುಲ್ ಸಾಂಕೃತ್ಯಾಯನ್ ಅವರು ಇದನ್ನು ಸಮರ್ಥಿಸಲೆಂದೇ 'ಅಥಾತೋ ಘುಮಕ್ಕಡ್ ಜಿಜ್ಞಾಸಾ'ವನ್ನು ಬರೆದರು.

"ಪ್ರಪಂಚದಲ್ಲಿ ಮಾನವನಾಗಿ ಹುಟ್ಟುವುದು ಒಮ್ಮೆ. ಯೌವನ ಬರುವುದೂ ಒಮ್ಮೆ. ಸಾಹಸಿಗಳೂ ಹಾಗೂ ಉತ್ಸಾಹಿ ತರುಣ-ತರುಣಿಯರು ಈ ಅವಕಾಶವನ್ನು ಕಳೆದುಕೊಳ್ಳಬಾರದು. ಅಲೆಮಾರಿಗಳ ಮುಂದಿನ ಪೀಳಿಗೆಯೇ ನಡು ಕಟ್ಟಿ, ಜಗತ್ತು ನಿಮ್ಮನ್ನು ಸ್ವಾಗತಿಸಲು ಕಾತೊರೆಯುತ್ತದೆ" ಎಂಬ ಅವರು ಅಂದದ್ದು ಸತ್ಯ (ಘುಮಕ್ಕಡ್ ಶಾಸ್ತ್ರ, ಪುಟ-೧೧).

ಯಶಪಾಲರ ಪ್ರವಾಸಗಳ ಬಗ್ಗೆ ಹೇಳುವುದಾದರೆ, ಅವರು ಮೂರು ಬಾರಿ ಯೂರೋಪಿಗೆ ಪ್ರವಾಸ ಹೋಗಿ ಬಂದರು. ಒಮ್ಮೆ ಮಾರಿಶಸ್‌ಗೆ ಹೋಗಿದ್ದರು.

ದೇಶದ ಒಳಗೆ, ಯಾವ ಮೂಲೆಯನ್ನೂ ಅವರು ನೋಡದೇ ಬಿಡಲಿಲ್ಲ. ಹೀಗೆ ಪ್ರವಾಸ ಕೈಗೊಳ್ಳುವುದು ಅವರ 'ಹಾಬಿ'ಯಾಗಿತ್ತು ಎನಿಸುತ್ತದೆ. ತಮಗೆ ಹೆಚ್ಚು ವಿಸ್ತಾರ ಒದಗಿಸಿಕೊಳ್ಳುವ ಸಲುವಾಗಿ ಅವರು ದೇಶದ ಒಳಗೆ ಹಾಗೂ ಹೊರಗೆ ಪ್ರವಾಸ ಮಾಡುತ್ತಲಿದ್ದರು.

ಯಶಪಾಲರು ಇಂಗ್ಲೆಂಡ್, ಸ್ವಿಟ್ಜರ್‌ಲ್ಯಾಂಡ್, ರಷ್ಯಾ, ಇಟಲಿ, ಜೆಕೋಸ್ಲಾವಾಕಿಯಾ, ರುಮಾನಿಯಾ, ಪೂರ್ವ-ಪಶ್ಚಿಮ ಜರ್ಮನಿ ಮತ್ತು ಅಫ್ಘಾನಿಸ್ತಾನಗಳಲ್ಲಿ ಸಂಚರಿಸಿದರು. ಈ ಪ್ರವಾಸಗಳ ವಿವರಣೆಗಳು 'ಲೋಹೇ ಕೀ ದೀವಾರ್ ಕೇ ದೊನೋಂ ಓರ್' (ಉಕ್ಕಿನ ಗೋಡೆಗಳ ಇಬ್ಬದಿಯಲ್ಲಿ) 'ರಾಹ್ ಬೀತೀ' (ದಾರಿಯ ಅನುಭವಗಳು) 'ಬೀಬೀ ಜೀ ಕೆಹತೀ ಹೈಂ, ಮೇರಾ ಚೆಹರಾ ರೋಬೀಲಾ ಹೈ' (ನನ್ನ ಚೆಹರೆ ದರ್ಪದಿಂದ ಕೂಡಿದೆ ಎಂದು ನನ್ನ ಹೆಂಡತಿ ಹೇಳುತ್ತಾಳೆ) ಇವುಗಳಲ್ಲಿವೆ. ಮಾರಿಶಸ್ ಪ್ರವಾಸದ ವಿವರಣೆ 'ಸ್ವರ್ಗೋದ್ಯಾನ್ ಬಿನಾ ಸಾಂಪ್' (ಹಾವುಗಳಿಲ್ಲದ ಸ್ವರ್ಗೋದ್ಯಾನ) ಎನ್ನುವುದರಲ್ಲಿದೆ. ದೇಶದೊಳಗಿನ ಪ್ರವಾಸದ ಬಗ್ಗೆ ಹೇಳಬೇಕಾದ ಅಂಶಗಳು ಈ ಪುಸ್ತಕಗಳಲ್ಲಿ ಅಲ್ಲಲ್ಲಿ ಬಂದಿವೆ. 'ದೇಖಾ-ಸೋಚಾ-ಸಮಝಾ'ದಲ್ಲಿ ಮುಖ್ಯವಾಗಿ ಸೇವಾಗ್ರಾಮ, ಶಿಮ್ಲಾ ಇಂದ ಕುಲ್ಲೂ ಹಾಗೂ ನೈನಿತಾಲ್‌ನ ಪ್ರವಾಸಾನುಭವಗಳಿವೆ. ಈ ಪ್ರವಾಸಗಳಿಂದ ಪ್ರಪಂಚದ ಎರಡು ರೀತಿಯ ದೇಶಗಳು ಹಾಗೂ ಅಲ್ಲಿನ ಜನಜೀವನ ಯಾವ ರೀತಿಯಲ್ಲಿ ಬೆಳೆದು ಬಂದಿದೆ ಎಂಬುದರ ಅರಿವಾಗುತ್ತದೆ.

ಒಂದು ಕಡೆ ಇಂಗ್ಲೆಂಡ್, ಸ್ವಿಟ್ಜರ್‌ಲ್ಯಾಂಡ್, ಇಟಲಿ, ಜರ್ಮನಿ, ಅಫ್‌ಘಾನಿಸ್ತಾನ್, ಮಾರಿಶಸ್‌ಗಳಲ್ಲಿವೆ. ಇಲ್ಲಿ ಸಂಪತ್ಭರಿತ, ಬಂಡವಾಳಶಾಹಿ ವ್ಯವಸ್ಥೆ ಇದೆ. ಅಥವಾ ಮೂರನೆಯ ಜಗತ್ತಿನ ಹೊರಹೊಮ್ಮುತ್ತಿರುವ ಸಮಸ್ಯೆಗಳು ಹಾಗೂ ಕಂದಾಚಾರಕ್ಕೆ ಬದ್ಧವಾದ ಮಾನಸಿಕತೆ ಕಂಡುಬರುತ್ತದೆ. ಇಂಗ್ಲೆಂಡಿನ ಪ್ರವಾಸದ ವೇಳೆ ಯಶಪಾಲ್ ಅವರು ಕಂಡದ್ದು ಪ್ರಧಾನವಾಗಿ ವ್ಯಾಪಾರಿ ಮನೋವೃತ್ತಿಯನ್ನು ಆಧರಿಸಿಕೊಂಡಿರುವ ವ್ಯವಸ್ಥೆಯನ್ನು. ಅಲ್ಲಿ ಮನುಷ್ಯನು ಮಾರು-ಕೊಳ್ಳು ವ್ಯವಸ್ಥೆಯ ಸಾಧನ ಮಾತ್ರವಲ್ಲದೆ ಇನ್ನೇನೂ ಅಲ್ಲ. ಸಿದ್ಧವಸ್ತುಗಳನ್ನು ಮಾರಾಟ ಮಾಡಲು ಸಂಪೂರ್ಣ ದೇಶ ಜಾಹೀರಾತುಗಳ ಪ್ರಪಂಚದಲ್ಲಿ ಮುಳುಗಿದೆ. ಇದು ಬಳಕೆದಾರರ ಅಭಿರುಚಿಗನುಗುಣವಾಗಿಲ್ಲ. ಬಂಡವಾಳಶಾಹಿ ವಿಕೃತಿಯು ಒಂದು ಕಡೆ ವೇಶ್ಯಾವೃತ್ತಿಯ ನಗ್ನ ನೃತ್ಯವಾಗಿ ಕಾಣಿಸಿಕೊಂಡರೆ, ಇನ್ನೊಂದು ಕಡೆ ಭಿಕ್ಷಾಟಣೆಯಾಗಿ ಕಾಣಿಸಿಕೊಳ್ಳುತ್ತದೆ. ಸ್ವಿಟ್ಜರ್‌ಲ್ಯಾಂಡ್ ಪ್ರಪಂಚದ ಅಭಿವೃದ್ಧಿಗೊಂಡ ಹಾಗೂ ಜನಗಳಿಗೆ ಆರೋಗ್ಯ ನೀಡುವ ದೇಶವೆಂದು ಪರಿಗಣಿತವಾಗಿದೆ. ಆದರೆ ಅಲ್ಲಿ ಕಂಡದ್ದೇನು? ಅಲ್ಲಿನ ಶ್ರೀಮಂತಿಕೆ ಮತ್ತು ಸ್ವಾತಂತ್ರ್ಯದ ಮಹತ್ವಪೂರ್ಣ ಅಂಶವೆಂದರೆ ದೊಡ್ಡವರ ಕ್ಲಬ್

ಜೀವನ ಮತ್ತು ಉಚ್ಛೃಂಖಲ ಭೋಗ. ನಮ್ಮ ದೇಶದಲ್ಲಿನ ಲಂಚಗುಳಿತನ, ಭ್ರಷ್ಟಾಚಾರ, ಮೋಸ ಮತ್ತು ಶೋಷಣೆಯನ್ನು ಕಂಡು ಇಲ್ಲಿನ ಭೂರ್ಷ್ವರಕ್ಷಕರು ವಿಕಾಸಗೊಳ್ಳದಿರುವ ಸ್ಥಿತಿಯೇ ಇದಕ್ಕೆ ಕಾರಣವೆನ್ನುತ್ತಾರೆ. ಆದರೆ ಯಶಪಾಲರು ಶ್ರೀಮಂತ ದೇಶಗಳ ಬಗ್ಗೆ ನೀಡಿರುವ ವಿವರಣೆಗಳಿಂದ ನಮಗೆ ಭ್ರಮನಿರಸನವಾಗುತ್ತದೆ. ಭ್ರಮಾಧೀನ ಮಧ್ಯವರ್ಗ ಹಾಗೂ ಶ್ರೀ ಸಾಮಾನ್ಯರ ಈ ಎಲ್ಲ ದೋಷಗಳು ಬಂಡವಾಳಶಾಹಿ ಸಂಸ್ಕೃತಿಯ ದೇಣಿಗೆ ಎಂದು ತಿಳಿದರೆ ಸಾಕು. ಅಸಮಾನತೆ ಹಾಗೂ ಶೋಷಣೆಗಳೇ ಈ ಎಲ್ಲಾ ವಿಕೃತಿಗಳು ಬೆಳೆದುಕೊಳ್ಳುವುದಕ್ಕೆ ಕಾರಣವಾಗುವುವು. ಈ ಸಮಾಜವೇ ಇಂತಹ ವಿಕೃತಿಗಳನ್ನು ಹುಟ್ಟು ಹಾಕುತ್ತದೆ ಮತ್ತು ಇವುಗಳಿಗೆ ಪರಿಹಾರ ಸೂಚಿಸುವ ಕೃತ್ರಿಮ ಪ್ರಚಾರ ಕೈಗೊಂಡು ಜನರ ಗಮನವನ್ನು ಬೇರೆ ಕಡೆ ಸೆಳೆಯುತ್ತವೆ. ತಮಗಾದ ಅನುಭವಗಳ ಆಧಾರದಿಂದ ಹೀಗೆಲ್ಲಾ ಬರೆಯುತ್ತಾರೆ. "ಇಟಲಿ, ಫ್ರಾನ್ಸ್, ಈಜಿಪ್ಟ್, ಮತ್ತು ಏಡನ್‌ನಲ್ಲಿ ಪದಾರ್ಥಗಳನ್ನು ದುಪ್ಪಟ್ಟು ಹೇಳುತ್ತಾರೆ. ಬಕ್ಷೀಸಿನ ಹೆಸರಿನಲ್ಲಿ ಲಂಚ ಕೇಳುತ್ತಾರೆ. ಪಾಸ್‌ಪೋರ್ಟ್ ಪರೀಕ್ಷಕನಿಗೆ ಬಕ್ಷೀಸು ಕೊಡದಿದ್ದರೆ ಪಾಸ್‌ಪೋರ್ಟಿನಲ್ಲಿನ ಫೋಟೋಗೂ ಮುಖಕ್ಕೂ ಹೋಲಿಕೆ ಇಲ್ಲವೇ ಇಲ್ಲ ಎಂದು ಬಿಡುತ್ತಾನೆ." ಈ ದೇಶಗಳಲ್ಲಿ ಜನಸಾಮಾನ್ಯನಿಗೂ ಮತ್ತು ವಿಶಿಷ್ಟ ವರ್ಗಕ್ಕೆ ಸೇರಿದ ವ್ಯಕ್ತಿಗೂ ಅಂತರ ಕಂಡುಬರುತ್ತದೆ. ರೋಮ್, ಲಂಡನ್ ಮೊದಲಾದ ನಗರಗಳಲ್ಲಿ ಪ್ರವಾಸ ಮಾಡಿದಾಗ ಅವರು ಕ್ರೈಸ್ತರ ನಡಾವಳಿಯನ್ನು ಕಂಡುಕೊಂಡರು. ಯಾವುದೇ ಧರ್ಮವು ಆಸೆ ಕಳಕೊಂಡ ಬಡವರ ಪಾರಲೌಕಿಕ ಉದ್ಧಾರಕ್ಕೆಂದೇ ಜನ್ಮತಾಳುತ್ತದೆ. ಕ್ರೈಸ್ತ ಧರ್ಮವು ಹುಟ್ಟಿದ್ದು ಹೀಗೆಯೇ. ನಂತರ ಆಡಳಿತ ಯಂತ್ರ ಅದನ್ನು ತನ್ನ ಉಪಕರಣವಾಗಿಸಿತು. ಇದು ರೋಮಿನಲ್ಲಷ್ಟೇ ಅಲ್ಲ, ಪಶ್ಚಿಮದ ದೇಶಗಳಿಗೆ ಸಾಮ್ರಾಜ್ಯವಾದವನ್ನು ವಿಸ್ತರಿಸುವಲ್ಲಿ ಹಾಗೂ ವ್ಯಾಪಾರವನ್ನು ಬೆಳೆಸುವಲ್ಲಿ ನೆರವಾಯಿತು. ನಿಸ್ಪೃಯತೆ, ಶಾಂತಿ ಮತ್ತು ಜನಸೇವೆಗಾಗಿ ಹುಟ್ಟಿಕೊಂಡ ಈ ಸಂಸ್ಕೃತಿಯು ಮಾನವ ಹತ್ಯೆಯನ್ನೆಸಗುವುದರಲ್ಲಿ ಇಸ್ಲಾಮಿಗಿಂತ ಹಿಂದೆ ಬೀಳಲಿಲ್ಲ. ಬೌದ್ಧ ಧರ್ಮ, ಜೈನ ಧರ್ಮ ಹಾಗೂ ಹಿಂದೂ ಧರ್ಮಗಳಲ್ಲಿ ಆದದ್ದು ಹೀಗೆಯೇ.

ಪಾಕಿಸ್ತಾನ ಮತ್ತು ಆಫ್‌ಘಾನಿಸ್ತಾನದಲ್ಲಿ ಮುಸಲ್ಮಾನರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಪಾಕಿಸ್ತಾನ ಹುಟ್ಟಿದ್ದು ಕೆಲವು ಮತೀಯ ಮನೋವೃತ್ತಿಯ ರಾಜಕೀಯ ನೇತಾರರಿಂದಲೇ, ಆ ದೇಶ ಅಸ್ತಿತ್ವಕ್ಕೆ ಬಂದಾಗಿನಿಂದಲೇ ಅಲ್ಲಿನ ಆಡಳಿತ ವ್ಯವಸ್ಥೆ ತನ್ನೆಲ್ಲ ಪ್ರಚಾರ ಸಾಧನಗಳನ್ನು ಬಳಸಿಕೊಂಡು ನೆರೆ ರಾಷ್ಟ್ರದ ಜನತೆಯ ಬಗ್ಗೆ ತಿರಸ್ಕಾರ ಮನೋಭಾವವನ್ನು ಬಿತ್ತುತ್ತಲೇ ಇದೆ. ಸ್ವತಂತ್ರತೆಗಾಗಿ ನಡೆದ ಆಂದೋಳನದಲ್ಲಿ ಹಿಂದೂ ಮುಸಲ್ಮಾನರು ಜೊತೆ ಜೊತೆಯಲ್ಲಿ ಭಾಗವಹಿಸಿ ಇಂಗ್ಲಿಷರ ವಿರುದ್ಧ ಹೋರಾಟ ನಡೆಸಿದರು. ಆದರೆ ಪಾಕಿಸ್ತಾನವು

ಯುವ ಪೀಳಿಗೆಗೆ ಕಲಿಸುವ ಇತಿಹಾಸದ ಬುನಾದಿಯಲ್ಲಿ ಮತೀಯ ದ್ವೇಷ ತುಂಬಿಕೊಂಡಿದೆ. ಈ ಕಾರಣದಿಂದಲೇ ಬಹಳಷ್ಟು ಕಾಲ ಯುದ್ಧ ಎನ್ನುವುದು ಆ ದೇಶದ ಆಡಳಿತದ ಸ್ಥಾಯೀ ಭಾವವಾಗಿ ಬಿಟ್ಟಿತ್ತು. ಇದರ ಮೂಲಕವೇ ಅವರು ತಮ್ಮ ಸಿಂಹಾಸನವನ್ನು ರಕ್ಷಿಸಿಕೊಂಡು ಬಡಜನರ ಗಮನವನ್ನು ಬೇರೆಡೆ ಹರಿಯುವಂತೆ ಮಾಡುತ್ತಿದ್ದಾರೆ. ಯಶಪಾಲರು ಪೇಶಾವರಿನಿಂದ ಕಾಬೂಲ್‌ವರೆಗೂ ಬಸ್ಸಿನಲ್ಲಿ ಸಂಚರಿಸಿ ಜನಮಾನಸವನ್ನು ಅರ್ಥ ಮಾಡಿಕೊಂಡರು. ಪೋಲೀಸ್ ಅಧಿಕಾರಿಗಳು ಇವರಿಗೆ ಗಡಿ ಪ್ರವೇಶಿಸಲು ಅನುಮತಿ ನೀಡುವುದೇ ಕಷ್ಟವಾಯಿತು. ಆಫ್‌ಘಾನಿಸ್ತಾನವನ್ನು ತಲುಪಿದ ಮೇಲೆ ಅವರು ಕಂಡದ್ದು ಅಲ್ಲಿನ ರಸ್ತೆಗಳು, ನೀರು ಮತ್ತು ವಿದ್ಯುಚ್ಛಕ್ತಿಯ ಪೂರೈಕೆಗಳಲ್ಲಿ ಅವ್ಯವಸ್ಥೆಯನ್ನು. ಧಾರ್ಮಿಕ ಕಂದಾಚಾರಗಳು ಹೇಗಿದ್ದವೋ ಹಾಗೇ ಉಳಿದುಕೊಂಡಿದ್ದವು. ಪೋಲೀಸ್ ಅಧಿಕಾರಿಗಳು ಬ್ರಿಟಿಷ್‌ರಿದ್ದ ಕಾಲದಲ್ಲಿನ ಹಾಗೇ ನಡೆದುಕೊಳ್ಳುತ್ತಿದ್ದರು. ಗ್ರಾಮಗಳ ಹಿಂದುಳಿದಿರುವಿಕೆ, ಬಡತನ ಮತ್ತು ನಿರುದ್ಯೋಗ ಭಾರತದಂತೆ ಇದ್ದವು. ಇಲ್ಲಿ ಹಿಂದೂ, ಸಿಖ್ ಮತ್ತು ಮುಸಲ್ಮಾನರಿದ್ದರು. ಮತೀಯ ಕಲಹಗಳು ಏರ್ಪಡುತ್ತಿರಲಿಲ್ಲ. ಆದರೆ ಅಂತಹ ಭಯ ಇದ್ದೇ ಇತ್ತು. 'ಪರ್ದಾ' ಪದ್ಧತಿ ಇನ್ನು ಆಚರಣೆಯಲ್ಲಿತ್ತು. ಕಾಬೂಲಿನಂತಹ ನಗರದಲ್ಲೂ ಕೊಳಕು ಕಾಣುತ್ತಿತ್ತು. ಬಿಟ್ಟಿ ದುಡಿಮೆ ಇನ್ನು ಜೀವಂತವಿತ್ತು. ಆಡಳಿತ ಮತ್ತು ಸಾಮಾಜಿಕ ಆಚರಣೆಗಳನ್ನು ಕಾಪಾಡಿಕೊಂಡು ಬರುವವರ ಬಗ್ಗೆ ಜನರಲ್ಲಿ ಅಸಂತೋಷವಿತ್ತು. ಆದರೆ ಅದು ಸುವ್ಯವಸ್ಥಿತವಲ್ಲ. ಅಂತರ್ರಾಷ್ಟ್ರೀಯ ಪ್ರಭಾವದ ದೃಷ್ಟಿಯಿಂದ ಇಂಗ್ಲಿಷರ ಅನುಕರಣೆಯೇ ಹೆಚ್ಚು. ಈ ಕಾರಣ ಜನಮಾನಸದ ಅತೃಪ್ತಿಗೆ ವೈಜ್ಞಾನಿಕವಾದ ಚಾಲನೆ ನೀಡಬೇಕಾದ ಅಗತ್ಯವಿತ್ತು.

ಸಮಾಜವಾದೀ ದೇಶಗಳಲ್ಲಿ ಕೈಗೊಂಡ ಪ್ರವಾಸಗಳಿಂದ ಎರಡು ತೆರನಾದ ವಿಚಾರಗಳು ಸ್ಪಷ್ಟಗೊಂಡವು. ಅಲ್ಲಿನ ಅವಶೇಷಗಳಿಂದ ತಿಳಿದು ಬರುವ ಪ್ರಾಚೀನ ಸಂಸ್ಕೃತಿ ಮತ್ತು ಹೊಸದಾದ ವಾಮ ಪಂಥದ ಸಂಸ್ಕೃತಿ-ಇವೆರಡರ ಗಳಿಕೆಗಳನ್ನು ಹೋಲಿಸಿ ನೋಡುವುದು ಪ್ರವಾಸಿಗಳಿಗೆ ಸಾಧ್ಯವಾಗುತ್ತದೆ. ಪೂರ್ವ ಜರ್ಮನಿ ಮತ್ತು ಪಶ್ಚಿಮ ಜರ್ಮನಿಗಳ ಪ್ರವಾಸವನ್ನು ಏಕಕಾಲದಲ್ಲಿ ಕೈಗೊಳ್ಳುವುದರಿಂದ ಬಂಡವಾಳಶಾಹಿ ಹಾಗೂ ಸಮಾಜವಾದಿ ದೇಶಗಳ ಸ್ಥಿತಿಗತಿಗಳನ್ನು ಸರಿಯಾಗಿ ಹೋಲಿಸಿ ನೋಡುವುದು ಸಾಧ್ಯವಾಗುತ್ತದೆ. ಯಶಪಾಲರು ಮೊದಲ ಬಾರಿಯ ಯುರೋಪ್ ಪ್ರವಾಸದ ಸಂದರ್ಭದಲ್ಲಿ ರಷ್ಯಾಗೂ ಹೋಗಿ ಬಂದರು. ಈ ಪ್ರವಾಸದಲ್ಲೇ ಅವರು ಜೆಕೋಸ್ಲಾವಾಕಿಯಾ, ರುಮಾನಿಯಾ ಮತ್ತು ಪೂರ್ವ ಜರ್ಮನಿಗಳ ಪರಿಚಯ ಮಾಡಿಕೊಂಡರು. ಎಲ್ಲ ಸಮಾಜವಾದಿ ದೇಶಗಳಲ್ಲೂ ಕ್ರಾಂತಿ ನಡೆದ ರೀತಿ ಒಂದೇ ತರಹದ್ದಾಗಿರಲಿಲ್ಲ. ರಷ್ಯಾ ಕ್ರಾಂತಿ ತಂದದ್ದು ಅಲ್ಲಿನ

ಶ್ರೀಸಾಮಾನ್ಯರು. ಜೆಕೋಸ್ಲಾವಾಕಿಯಾದಲ್ಲಿ ದ್ವಿತೀಯ ಮಹಾಯುದ್ಧದ ಕಾಲದಲ್ಲಿ ರಷ್ಯಾವು ಸಹಾಯ ನೀಡಿ ನಾಜಿಗಳನ್ನು ಹೊರಹಾಕಿತು. ಹೀಗಾಗಿ ವೈಧಾನಿಕವಾಗಿ ಸಮಾಜವಾದಿ ವ್ಯವಸ್ಥೆ ರೂಪುಗೊಂಡಿತು. ಈ ಕಾರಣದಿಂದಲೇ ತದನಂತರದ ವ್ಯವಸ್ಥೆಯಲ್ಲಿ ಮಾರ್ಕ್ಸ್-ಲೆನಿನ್‌ರ ಸಿದ್ಧಾಂತಗಳನ್ನು ಒಪ್ಪಿಕೊಂಡರೂ ವ್ಯವಹಾರದಲ್ಲಿ ಒಂದಿಷ್ಟು ವ್ಯತ್ಯಾಸ ಉಳಿದುಕೊಂಡಿದೆ. ಸಮಾಜವಾದೀ ದೇಶಗಳ ಆಡಳಿತ ವ್ಯವಸ್ಥೆಯಲ್ಲಿ ಯಾವುದೇ ಒಬ್ಬ ವ್ಯಕ್ತಿಯದಾಗಿ ಆಡಳಿತ ಇರುವುದಿಲ್ಲ. ಹೀಗಾಗಿ ಇಡೀ ವ್ಯವಸ್ಥೆಯು ಜನಹಿತಕ್ಕೆ ಜವಾಬ್ದಾರವಾಗಿರುತ್ತದೆ. ಉತ್ಪಾದನೆಯಿಂದ ಆರಂಭಿಸಿ ಮಾರಾಟದ ವರೆಗೂ ಬಳಕೆದಾರರ ಅಭಿರುಚಿಯನ್ನು ಗಮನಿಸಿಕೊಳ್ಳಲಾಗುತ್ತದೆ. ಜಗತ್ತಿನ ಉಳಿದ ರಾಷ್ಟ್ರಗಳ ಬಗ್ಗೆ ಅಲ್ಲಿ ತಿರಸ್ಕಾರವಿರುವುದಿಲ್ಲ. ಅಲ್ಲಿನ ಆಡಳಿತ ವ್ಯವಸ್ಥೆಯಲ್ಲಿ ಜನಗಳಿಗಿಂತ ಬಂಡವಾಳಶಾಹಿಗಳ ಕೈಯಲ್ಲೇ ರಾಜ್ಯಸೂತ್ರಗಳಿರುವುದೆಂದೂ, ಹೀಗಾಗಿ ಅವರು ವರ್ಗದ ಪಾತ್ರವನ್ನು ರಕ್ಷಿಸಿಕೊಂಡು ಬರುವ ಸಲುವಾಗಿ ಪ್ರಜಾತಂತ್ರದ ನೈಜಸ್ಥಿತಿಯನ್ನು ಅಲ್ಲಿ ಬೆಳೆಯಲು ಬಿಡುವುದಿಲ್ಲವೆಂಬ ವಿಷಯ ಸಾಮ್ಯವಾದೀ ರಾಷ್ಟ್ರಗಳ ಜನತೆಗೆ ತಿಳಿದಿದೆ. ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಸಾಮ್ಯವಾದವನ್ನು ವಿಕೃತಗೊಳಿಸಿ ತೋರಿಸಲು ಹಣವನ್ನು ನೀರಿನಂತೆ ಪೋಲು ಮಾಡುತ್ತಾರೆ. ಯಾವುದೇ ದೇಶವನ್ನು ಸಾಮ್ಯವಾದ ಪ್ರವೇಶಿಸಲು ಹವಣಿಸುತ್ತಿರುವಾಗಲೇ, ಅದಕ್ಕೆ ಮೊದಲೇ ಅಲ್ಲಿ ವಿರೋಧವನ್ನು ಬಿತ್ತಿ ಬಿಡುತ್ತಾರೆ. ನಿಜವಾದ ಭ್ರಾತೃತ್ವ, ಮೈತ್ರಿ ಹಾಗೂ ಪ್ರೀತಿ ಎಲ್ಲಿಯಾದರೂ ಇದೆ ಎಂದರೆ ಅದು ಸಮಾಜವಾದೀ ರಾಷ್ಟ್ರಗಳಲ್ಲಿ ಮಾತ್ರ.

ಈ ದೇಶಗಳಲ್ಲಿ ಮಹಲುಗಳನ್ನಾಗಲಿ ದೊಡ್ಡ ದೊಡ್ಡ ಸೌಧಗಳನ್ನಾಗಲಿ ನಿರ್ಮಿಸುವ ಬದಲು ಜನ ಸಾಮಾನ್ಯರಿಗೆ ಹೆಚ್ಚು ಸೌಲಭ್ಯಗಳು ದೊರೆಯುವ ಹಾಗೆ ಮನೆಗಳನ್ನು ನಿರ್ಮಿಸುತ್ತಾರೆ. ಅವರವರ ಅವಶ್ಯಕತೆಗನುಗುಣವಾಗಿ ಕಡಿಮೆ ಹಾಗೂ ಹೆಚ್ಚು ಸ್ಥಳಾವಕಾಶವುಳ್ಳ ಮನೆಗಳು ದೊರೆಯುತ್ತವೆ. ಹೆಚ್ಚು ಕಾಯ ಕಷ್ಟದ ಕೆಲಸಗಳನ್ನು ಮಾಡುವ ಶ್ರಮಜೀವಿಗೆ ಕಿರಾಣಿ ಅಂಗಡಿಯ ಕಾರಕೂನನಿಗಿಂತ ಹೆಚ್ಚು ಸಂಬಳ ದೊರೆಯುತ್ತದೆ. ದೇಶದ ಆದಾಯಕ್ಕನುಗುಣವಾಗಿ ಪ್ರತಿ ದೇಶದಲ್ಲಿ ಸಂಬಳ ಸಾರಿಗೆಗಳನ್ನು ನಿಶ್ಚಯಿಸಲಾಗುತ್ತಿದೆ. ಜೆಕೋಸ್ಲಾವಾಕಿಯದಲ್ಲಿ ಕನಿಷ್ಠ ಸಂಬಳ ೭೦೦ ಕ್ರೌನ್‌ಗಳು. ಪೂರ್ವ ಜರ್ಮನಿ ಮತ್ತು ರಷ್ಯಾದಲ್ಲಿ ಜೀವನದ ಮಟ್ಟ ಬಹಳಷ್ಟು ವಿಕಾಸಗೊಂಡಿದೆ. ಐರೋಪ್ಯ ಸಮಾಜವಾದೀ ದೇಶಗಳಲ್ಲಿ ಹಿಂದಿನ ಕಾಲದ ಅವಶೇಷಗಳನ್ನು ಕಾಪಾಡಿಕೊಂಡು ಬಂದಿದ್ದಾರೆ. ನಾಜಿಯುಗದ ಅಸ್ತ್ರಗಳು ಈಗಲೂ ಆ ಯುಗದ ಭೀಕರತೆಯನ್ನು ನೆನಪಿಗೆ ತರುತ್ತವೆ. ಯಾವುದೇ ದೇಶವಲ್ಲಿ ಬೂರ್ಜ್ವಾ ಆಕ್ರಮಣ ಮತ್ತು ನಿಷ್ಕರುಣ ಹತ್ಯೆ ನಡೆಯಿತೆಂಬ

ಸುದ್ದಿಯನ್ನು ಕೇಳಿ ಈ ದೇಶದ ನಾಗರಿಕರು ಕಳವಳಗೊಳ್ಳುತ್ತಾರೆ. ಅವರ ನೋವು ಯಾವುದೇ ದೇಶದ ಎಲ್ಲೆಗೆ ಸೀಮಿತಗೊಳ್ಳದೆ ಮಾನವೀಯ ಸಂದರ್ಭಗಳಿಗೆ ಸ್ಪಂದಿಸುತ್ತದೆ. ರಷ್ಯನ್ ಭಾಷೆಯನ್ನು ಅಭ್ಯಾಸ ಮಾಡುವುದರಿಂದ ಎಲ್ಲ ಸಮಾಜವಾದಿ ದೇಶಗಳು ವಾಮ ಪಕ್ಷದ ಸಂಸ್ಕೃತಿಯಲ್ಲಿ ಸಹಭಾಗಿಗಳಾಗಿದ್ದೇವೆಂಬ ಅನುಭೂತಿಗೆ ಒಳಗಾಗುತ್ತಾರೆ. ಈ ಭಾಷೆ ಅವರಿಗೆ ಸಂಸ್ಕಾರದ ಭಾಷೆ. ಈ ದೇಶದ ಅಂಗಡಿಗಳು, ಪಾರ್ಕುಗಳು ಮತ್ತು ಉಳಿದ ಸ್ಥಳಗಳಿಗೆ ಇಡಲಾಗಿರುವ ಹೆಸರುಗಳು ವ್ಯಕ್ತಿವಾಚಕವಲ್ಲ. ವ್ಯಕ್ತಿವಾಚಕವಾದ ಹೆಸರು ಯಾವುದಾದರೂ ಇದ್ದರೆ ಅದು ಬಂಡವಾಳಶಾಹಿ ವ್ಯಕ್ತಿವಾದ ವ್ಯವಸ್ಥೆ ಇದ್ದ ಕಾಲದಲ್ಲಿ ಇಡಲಾಗಿದ್ದ ಹೆಸರುಗಳು. ಈಗ ಇಡಲಾಗಿರುವ ಹೆಸರುಗಳು, ವಸ್ತುಗಳ, ಸ್ಥಾನಗಳ ಮತ್ತು ಮಾರಾಟಕ್ಕಿಟ್ಟ ಪದಾರ್ಥಗಳ ಮೇಲಿರುತ್ತದೆ. ಲೆನಿನ್ ಮತ್ತು ಮಾರ್ಕ್ಸ್ ಅವರ ಹೆಸರಿನ ಮೇಲೆ ಯಾವುದಾದರೂ ಸಾರ್ವಜನಿಕ ಸ್ಥಾನವಿದೆಯೆಂದರೆ ಅದು ವ್ಯಕ್ತಿಪೂಜೆಗೆಂದಲ್ಲ. ಈ ಹೆಸರುಗಳು ಅವರಿಗೆ ತಮ್ಮ ಹೃದಯದ ಬಡಿತದಂತೆ. ಹೆಚ್ಚಾಗಿ ಇವೆಲ್ಲಾ ಸರ್ಕಾರಿ ಸ್ಥಾನಗಳೇ. ಸರ್ಕಾರಿ ಸ್ಥಾನಗಳಾದರೆ ಅದು ಪ್ರತಿಯೊಬ್ಬನ ಒಡೆತನಕ್ಕೆ ಸೇರಿರುತ್ತದೆ. ರಷ್ಯಾದಲ್ಲಿ ಸಹಕಾರಿ ಕೃಷಿ ನಡೆಯುತ್ತದೆ. ಜೆಕೋಸ್ಲಾವಿಯಾದಲ್ಲಿ ಕೆಲವೆಡೆ ವ್ಯಕ್ತಿಯ ಒಡೆತನದ ಹೊಲಗಳೂ ಇವೆ. ಯುಗೋಸ್ಲಾವಿಯಾದಲ್ಲಿ ವ್ಯಕ್ತಿಗತ ಒಡೆತನವನ್ನು ಪೂರ್ಣವಾಗಿ ಸಮಾಪ್ತಗೊಳಿಸಿಲ್ಲ. ಅಲ್ಲಿ ರೈತರಿಗೆ ಸ್ವತಂತ್ರ ವ್ಯಕ್ತಿಗತ ಅಧಿಕಾರ ಕೊಟ್ಟ ಕಾರಣ ರಷ್ಯಾ ಅಸಮಾಧಾನ ವ್ಯಕ್ತಪಡಿಸಿತು ಎಂದು ಅಲ್ಲಿನ ಲೇಖಕ ಅಂತೋನ್ ಹೇಳಿದರು. ಯುಗಾಸ್ಲಾವಿಯಾ ತಮ್ಮ ಪರಿಸ್ಥಿತಿಗನುಸಾರವಾಗಿ ರಾಷ್ಟ್ರೀಕರಣವನ್ನು ಮಾಡಿತು. ಹಾಗೆಂದ ಮಾತ್ರಕ್ಕೆ ಮಾರ್ಕ್ಸ್‌ವಾದದಿಂದ ದೂರ ಉಳಿಯಿತು ಎಂದಲ್ಲ. ಈ ದೇಶಗಳು ಬಡತನದಿಂದ ಬಿಡುಗಡೆ ಹೊಂದುವ ವಿಚಾರಕ್ಕೆ ಎಲ್ಲಿಲ್ಲದ ಆದ್ಯತೆ ನೀಡಿದವು. ಪ್ರತಿಯೊಬ್ಬ ವ್ಯಕ್ತಿಗೂ ಕೆಲಸ ಮಾಡುವ ಅಧಿಕಾರವನ್ನು ರಾಜ್ಯಾಂಗವೇ ಘೋಷಿಸಿದೆ. ಸಂಪತ್ತಿನ ಅಸಮಾನತೆಯನ್ನು ತೊಡೆದು ಹಾಕಿದೆ. ಶ್ರೀಸಾಮಾನ್ಯನ ಕೊರಳಿಗೆ ಬಿದ್ದ ಆರ್ಥಿಕ ಹಾಗೂ ಸಾಮಾಜಿಕ ನೇಣುಗಳನ್ನು ಕತ್ತರಿಸಿ ಹಾಕಿದ್ದಾರೆ. ಹೀಗಾಗಿ ಅಭಿವೃದ್ಧಿಯನ್ನು ಗಳಿಸಿಕೊಳ್ಳುವ ಅವಕಾಶಗಳು ಅವರಿಗೆ ದೊರೆತಿವೆ. ಇದು ಮಾನವನ ವಿಮುಕ್ತಿಯ ಪೂರ್ಣ ಪ್ರಯತ್ನವಾಗಿ ಪರಿಣಾಮ ಬೀರಿತು. ಇಲ್ಲಿನ ವ್ಯಕ್ತಿ ತನ್ನ ಹಾಗೂ ತನ್ನವರ ಭವಿಷ್ಯದ ಚಿಂತೆಯಲ್ಲಿ ತೊಡಗಿರದೆ ರಾಷ್ಟ್ರೀಯ ಹಾಗೂ ಮಾನವೀಯ ಭವಿಷ್ಯದ ಚಿಂತೆಗಳಿಗೆ ಸಮೀಪವಾಗುತ್ತಾನೆ. ನಮ್ಮಲ್ಲಿನ ಪ್ರಜೆ ತನ್ನ ವ್ಯಕ್ತಿಗತ ಚಿಂತೆಗಳಲ್ಲಿ ಮುಳುಗಿರುತ್ತಾನೆ: ಆದರೆ ರಷ್ಯಾ ದೇಶದ ಪ್ರಜೆ ರಾಷ್ಟ್ರೀಯ ಹಾಗೂ ಮಾನವೀಯ ಚಿಂತೆಗಳಿಂದ ಕಂಗೆಡುತ್ತಾನೆ. ರಷ್ಯಾದ ಜನಮಾನಸವನ್ನು ನಾಜೀ ಅತ್ಯಾಚಾರ, ಶಸ್ತ್ರಾಸ್ತ್ರಗಳ ಕ್ರೂರತೆ ಕಲಕುತ್ತದೆ. ಹೀಗಾಗಿಯೇ ಮುಕ್ತಿಗಾಗಿ ಹೋರಾಟ ನಡೆಸಿದ ಲೆನಿನ್ ಅವರ ಶ್ರದ್ಧೆಗೆ ಪಾತ್ರನಾಗಿದ್ದಾನೆ. ಸ್ಟಾಲಿನ್ನನನ್ನು

ಕುರಿತು ಬೇರೆ ಬೇರೆಯ ಅಭಿಪ್ರಾಯಗಳಿವೆ. ಜೆಕೋಸ್ಲಾವಾಕಿಯಾದಲ್ಲಿ ಒಂದು ಪರ್ವತ ಶಿಖರದ ಹೆಸರು ಸ್ಟಾಲಿನ್ ಶಿಖರ. ಅವರ ನಂಬುಗೆಯಂತೆ ಸ್ಟಾಲಿನ್ ಸಾಮ್ಯವಾದೀ ವ್ಯವಸ್ಥೆಗೆ ಶಿಖರಕ್ಕಿಂತ ಕಡಿಮೆ ಮಹತ್ವದವನೇನಲ್ಲ.

ಸಮಾಜವಾದೀ ದೇಶಗಳಲ್ಲಿನ ಜನರಿಗೆ ಪಾಪ ಸಂಸ್ಕೃತಿಯು ಅಂತರಂಗದ್ದೂ, ಸ್ವಯಂಸ್ಫೂರ್ತವೂ, ಸಹಜವೂ ಆದದ್ದು. ಬಂಡವಾಳಶಾಹಿ ವ್ಯವಸ್ಥೆಯು ಈ ಸಂಸ್ಕೃತಿಗೆ ಯಾವೆಲ್ಲ ಉಪಾಯಗಳಿಂದ ಮುಸಿ ಬಳಿದಿದೆಯೋ, ಅದಕ್ಕೆಲ್ಲಾ ಈ ಪ್ರವಾಸಗಳಲ್ಲಿ ಉತ್ತರ ಸಿಗುತ್ತದೆ. ಇದರಲ್ಲಿರಬೇಕಾದ ನಂಬುಗೆಗೆ ಪುರಾವೆಗಳ ಪ್ರಾಮಾಣಿಕತೆಯನ್ನು ಅಪೇಕ್ಷಿಸುವ ಜನರು ಈ ದೇಶಗಳಿಗೆ ಹೋಗಿ ಬರಬೇಕು. 'ಈ ದೇಶಗಳಲ್ಲಿನ ಜನರಿಗೆ ಅಭಿವ್ಯಕ್ತಿ ಸ್ವಾತಂತ್ರವಿಲ್ಲ. ಇಲ್ಲಿನ ಜನರು ಬರೇ 'ಲೌಡ್ ಸ್ಪೀಕರ್'ಗಳಾಗಿ ಬಾಳು ತೆಗೆಯುತ್ತಾರೆ' ಎಂಬೆಲ್ಲ ಮಾತುಗಳು ಕೇಳಿಬರುತ್ತವೆ. ಧರ್ಮದ ಬಗ್ಗೆ ವದಂತಿಗಳನ್ನು ಹರಡಲಾಗುತ್ತದೆ. ಯಶಪಾಲರು ಈ ಎಲ್ಲ ಪ್ರಶ್ನೆಗಳನ್ನೆತ್ತಿಕೊಂಡು ತಮ್ಮ ಪ್ರವಾಸ ಕಥನದಲ್ಲಿ ಉತ್ತರಗಳಿಗೆ ಜೀವ ತುಂಬಿದ್ದಾರೆ. ಅವರು ಜೆಕ್, ಪೂರ್ವ ಜರ್ಮನಿ, ರಷ್ಯಾ ಮತ್ತು ರುಮಾನಿಯಾದ ಜನರೊಡನೆ ನಡೆಸಿದ ಮಾತುಕತೆಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಇದರಿಂದ ಜನಗಳ ಜೀವನಚರಿತ್ರೆಯೋ ನಮಗೆ ತಿಳಿದುಬರುತ್ತದೆ.

ಜನಸಾಮಾನ್ಯರಿಗೆ ಸ್ವಾತಂತ್ರ್ಯ ಅಥವಾ ಲೇಖಕರಿಗೆ ಸ್ವಾತಂತ್ರ್ಯ ಇವುಗಳ ಸಂಬಂಧವಾಗಿ ಜೆಕೋಸ್ಲಾವಾಕಿಯಾದ ಲೇಖಕರ ಕಾಂಗ್ರೆಸ್ಸು ಸ್ವೀಕರಿಸಿರುವ ಗೊತ್ತುವಳಿಗಳಿಂದ ನಮಗೆ ಮಾಹಿತಿ ಸಿಗುತ್ತದೆ. ಆ ಗೊತ್ತುವಳಿಗಳ ಅಂಶಗಳು ಹೀಗಿವೆ "ವ್ಯಕ್ತಿಯ ಸಂಪೂರ್ಣ ವಿಕಾಸ ಮತ್ತು ಮುಕ್ತಿಗಾಗಿ ಹೋರಾಟ ನಡೆಸುವುದರಲ್ಲೇ ಸಾರ್ಥಕತೆ ಇರುವುದು. ಲೇಖಕನು ತನ್ನ ಕಲೆಯನ್ನು ಬಳಸಿಕೊಂಡು ಹೊಸ ಆದರ್ಶಗಳನ್ನು ಮುಂದಿಟ್ಟಾಗ, ಅವನ ಮೇಲೆ ಆದರ್ಶರಹಿತ, ಭೌತಿಕವಾದಿ ಎಂದು ಆರೋಪಗಳನ್ನು ಹೊರಿಸಲಾಗುತ್ತದೆ. ಇಂದಿನ ಲೇಖಕನ ಬೇರುಗಳಿರುವುದು ವಾಸ್ತವಿಕತೆಯಲ್ಲಿ. ಈ ಕಾರಣ ಅವನು ಭೌತಿಕವಾದಿ ಎನ್ನುವುದು ನಿಜ. ಆದರೆ ಅವನು ಆದರ್ಶರಹಿತ ಎಂಬುದು ನಿಜವಲ್ಲ. ಅವನ ಆದರ್ಶಗಳು ಹೆಚ್ಚು ವಾಸ್ತವವಾದವುಗಳು. ಇಂದಿನ ಲೇಖಕ ತನ್ನ ಕಲೆಗಾರಿಕೆಯಿಂದ ಹೊಸ ಆದರ್ಶಗಳನ್ನು ಸಮರ್ಥಿಸಿದಾಗ ಅವನನ್ನು ಪ್ರಚಾರಕನೆಂದು ಹೀಗಳೆಯುತ್ತಾರೆ. ಲೇಖಕ ಸದಾ ಕಾಲಕ್ಕೂ ತನ್ನ ಕಲೆಯ ಮೂಲಕ ಯಾವುದೋ ಅಭಿಪ್ರಾಯಕ್ಕೋ ಅಥವಾ ಆದರ್ಶಕ್ಕೋ, ಸಹಾನುಭೂತಿ ನೀಡುತ್ತಾನೆ. ಹಾಗಿಲ್ಲವಾದಲ್ಲಿ ಅದರ ಬಗ್ಗೆ ವಿರೋಧ ಬೆಳಸುತ್ತಾನೆ. ಹೀಗೆ ಸಾಹಿತ್ಯವು ವೈಚಾರಿಕವಾಗುತ್ತದೆ. ವಿಚಾರರಹಿತ ಸಾಹಿತ್ಯವನ್ನು ಸೃಜಿಸುವುದಕ್ಕಿಂತ ಪ್ರಚಾರಕನೆಂಬ ದೂಷಣೆಯನ್ನು ಅಂಗೀಕರಿಸುವುದೇ ಲೇಸು" (ರಾಹ್ ಭೀತಿ, ಪುಟ-೨೯).

ಸಮಾಜವಾದೀ ದೇಶಗಳಲ್ಲಿ ಸ್ವೇಚ್ಛಾಭಿವ್ಯಕ್ತಿಗೆ ಅನುಮತಿ ಇಲ್ಲ ಎಂಬುದಂತೂ ಸುಸ್ಪಷ್ಟ. ಲೇಖಕನಾಗಲಿ, ನಾಗರಿಕನಾಗಲಿ ಅವನ ಪ್ರತಿ ಹೆಜ್ಜೆಯೂ ಆದರ್ಶಗಳನ್ನು ಸೃಷ್ಟಿಸುವೆಡೆಗೆ ಮತ್ತು ಅದನ್ನು ಕಾಪಾಡುವ ತಾಣಕ್ಕೆ ಮುಂದಡಿಯಾಗುತ್ತದೆ. ಕಲೆಗಾರ ಕಲೆಯ ಉಪಕರಣಗಳನ್ನು ನಿರ್ಲಕ್ಷಿಸುವಂತಿಲ್ಲ. ಅವನು ಸದಾ ಕಾಲ ರಚನಾತ್ಮಕ ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತಾನೆ. ಈ ದೇಶಗಳ ಲೇಖಕರು ಆರ್ಥಿಕ ದೃಷ್ಟಿಯಿಂದ ಪರಮುಖಾಪೇಕ್ಷಿಗಳಲ್ಲ. ಅವರದೇ ಪ್ರಕಾಶನ ಸಂಸ್ಥೆಗಳಿವೆ. ಹೀಗಾಗಿ ಅವರು ಭದ್ರವಾದ ನೆಲೆ ಉಳ್ಳವರು. ಆರ್ಥಿಕವಾದ ಈ ಸ್ವಾವಲಂಬನೆಯಿಲ್ಲದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅರ್ಥವಿದೆಯೇ ? ಈ ದೇಶಗಳಲ್ಲಿ ಪ್ರಪಂಚದ ಉಳಿದ ದೇಶಗಳ ಸಂಸ್ಕೃತಿಗಳಲ್ಲಿರುವ ಮಾನವೀಯ ಉಪಲಬ್ಧ ಸಾಧನೆಗಳನ್ನು ಗುರುತಿಸಬೇಕೆಂಬ ಕಾಳಜಿ ಇದೆ. ಅಲ್ಲಿನ ವಿಶ್ವ ವಿದ್ಯಾಲಯಗಳಲ್ಲಿ ಬೇರೆಯ ಭಾಷೆಗಳ ಅಧ್ಯಯನಕ್ಕೆ ವ್ಯವಸ್ಥೆ ಇದೆ. ಭಾಷೆಯ ಕಲಿಕೆಯ ಗುರಿಯೂ ತತ್ಸಂಬಂಧವಾದ ಸಂಸ್ಕೃತಿಯನ್ನು ಅರಿತುಕೊಳ್ಳುವುದೇ ಹೌದು. ಅವರು ಅಂತಾರಾಷ್ಟ್ರೀಯ ಮಟ್ಟದ ಕೃತಿಗಳನ್ನು ಅನುವಾದಿಸುತ್ತಾರೆ. ರಷ್ಯಾ, ಚೆಕ್ ಮತ್ತು ಪೂರ್ವ ಜರ್ಮನಿಗಳಲ್ಲಿ ತುಲಸೀದಾಸ, ರವೀಂದ್ರ, ಪ್ರೇಮಚಂದ (ಸ್ವತಃ ಯಶಪಾಲ) ಇವರುಗಳ ಕೃತಿಗಳು ಅನುವಾದಗೊಂಡಿವೆ. ಹೊಸ ಕಥೆ, ಕಾದಂಬರಿ, ಕವಿತೆಗಳ ಅನುವಾದದ ಸಂಕಲನಗಳು ಬೆಳಕು ಕಂಡಿವೆ. ಪತ್ರಿಕೆಗಳು ಓದಲ್ಪಡುತ್ತವೆ. ಈ ಕಾರಣದಿಂದಲೇ ಬೇರೆ ಭಾಷೆಗಳ ಅತಿಥಿಗಳಿಗೂ ಈ ದೇಶಗಳಲ್ಲಿ ತಮ್ಮ ದೇಶದ ಸಾಹಿತ್ಯ ಓದಲು ಸಿಗುತ್ತದೆ. ಪ್ರವಾಸ ಮಾಡುತ್ತಿರುವ ದೇಶದ ಭಾಷೆ ಗೊತ್ತಿಲ್ಲದಿದ್ದರೂ ಪ್ರವಾಸ ಕಾಲದಲ್ಲಿ ತೊಂದರೆ ಆಗುವುದಿಲ್ಲ. ಇಂಗ್ಲಿಷ್ ಭಾಷೆಯ ವಸಾಹತುವಾದೀ ಯಾಜಮಾನ್ಯವನ್ನು ತೊಡೆದು ಹಾಕಲು ಸೂಕ್ತ ಉಪಾಯಗಳನ್ನು ಕಾರ್ಯಗತಗೊಳಿಸಿದ್ದಾರೆ. ಜೆಕ್‌ನಲ್ಲಿ ಡಾ. ಸ್ಮೇಕಲ್, ರಷ್ಯಾದಲ್ಲಿ ಡಾ. ಚೆಲಿಶೆವ್ ಹಾಗೂ ಪೂರ್ವ ಜರ್ಮನಿಯಲ್ಲಿ ಡಾ. ನೆಸ್ಪಿಟಾಲ್‌ರಂತಹ ಸಾಧಕ ಲೇಖಕರು ಪೂರ್ವ ದೇಶಗಳ ಭಾಷಾ ವಿಭಾಗದಲ್ಲಿ ಬಹು ಮುಖ್ಯವಾದ ಪಾತ್ರ ವಹಿಸಿದ್ದಾರೆ. ಯಶಪಾಲರಿಗೆ ಜೆಕ್ ದೇಶದಲ್ಲಿ ಮಿಲಾನಾ ಹಿಬ್ನಿಮನೋವಾ ಅಥವಾ ಮೇರಿಯಾ ಅವರು ಭಾಷಾಂತರಕಾರರಾಗಿದ್ದುಕೊಂಡು ಇಡೀ ದೇಶದಲ್ಲಿ ಪ್ರವಾಸ ಮಾಡಿಸಿದರು.

ಧಾರ್ಮಿಕ ಸ್ವಾತಂತ್ರ್ಯದ ಪ್ರಶ್ನೆಯನ್ನು ತೆಗೆದುಕೊಂಡು ಯಶಪಾಲರು ಬರೆಯುತ್ತಾರೆ. ಜೆಕೋಸ್ಲಾವಾಕಿಯಾದಲ್ಲಿ ಕ್ರಿಸ್ತನ ತಾಯಿ ಮರಿಯಮ್ಮಳ ಪ್ರತಿಮೆಗಳುಳ್ಳ ಚೌಕಗಳು ಬೇಕಾದಷ್ಟಿವೆ. ಅವುಗಳಿಗೆ ನಿತ್ಯಪೂಜೆ ನಡೆಯುತ್ತದೆ. ಅಲ್ಲಲ್ಲಿ ಕಮ್ಯೂನಿಸ್ಟರ ಗುರ್ತಾದ ಕುಡುಗೋಲು ಮತ್ತು ಸುತ್ತಿಗೆಯ ಚಿನ್ಹೆಗಳನ್ನು ಸ್ಥಾಪಿಸಿದ್ದಾರೆ. 'ಮೇ ದಿವಸ ಚಿರಾಯುವಾಗಲಿ' ಎಂದೂ ಬರೆದಿದ್ದಾರೆ. ಈ

ದೇಶದಲ್ಲಿ ಪ್ರಾಚೀನ ರೋಮನ್ ಕ್ಯಾಥಲಿಕ್ ಅಥವಾ ಕ್ರೈಸ್ತ ಧರ್ಮದ ಸನಾತನ ಪರಂಪರೆ ಆಚರಣೆಯಲ್ಲಿದೆ. ಇಲ್ಲಿನ ಜನಗಳು ಕಮ್ಯೂನಿಜಂ ಮತ್ತು ಧರ್ಮ ಎರಡನ್ನು ಒಟ್ಟೊಟ್ಟಿಗೆ ಕಾಪಾಡಿಕೊಂಡು ಬಂದಿದ್ದಾರೆ. ರುಮಾನಿಯಾದಲ್ಲಿ ಚರ್ಚುಗಳು ಉಳಿದುಕೊಂಡಿವೆ. ಸರ್ಕಾರವು ಅವಕ್ಕೆ ಗ್ರಾಂಟ್ ಕೊಡುತ್ತದೆ. ಈ ದೇಶದಲ್ಲಿ ಪಾದರಿಗಳು ಮತ್ತು ಧರ್ಮೋಪದೇಶಕರಿಗೆ ಕ್ರೈಸ್ತ ಸಂಪ್ರದಾಯದ ಬಗ್ಗೆ ಶಿಕ್ಷಣ ನೀಡಲು ಆರು ಕಾಲೇಜುಗಳನ್ನು ಹೊಂದಿದ ಒಂದು ವಿಶ್ವವಿದ್ಯಾಲಯವೂ ಇದೆ ಎಂದರೆ ಅಚ್ಚರಿಯುಂಟಾಗುತ್ತದೆ. ಅಲ್ಲಿನ ಮಂತ್ರಿಗಳನ್ನು ಈ ಸಂಬಂಧದಲ್ಲಿ ಪ್ರಶ್ನಿಸಲಾಗಿ ಅವರು ಹೀಗೆ ಉತ್ತರಿಸಿದರು. 'ಈ ಮತ-ಸಂಬಂಧವಾದ ನಂಬಿಕೆ ಒಂದು ವಿಶಿಷ್ಟ ರೀತಿಯ ಆರ್ಥಿಕ ಜೀವನ ಪದ್ಧತಿಯಿಂದ ಸಾರಲ್ಪಟ್ಟಿದೆ. ಆ ಪದ್ಧತಿಯನ್ನು ಬದಲಿಸುವುದು ಮೊದಲ ಆದ್ಯತೆ ಆಗಬೇಕು. ಜನತೆಗೆ ವೈಜ್ಞಾನಿಕವಾಗಿ ಯೋಚಿಸಲು ಸಾಧ್ಯವಾಗುವಂತಹ ಶಿಕ್ಷಣ ನೀಡಬೇಕು. ಆದರೆ ಅವರ ಮನಸ್ಸಿಗೆ ಆಘಾತ ಮಾಡುವುದರಿಂದ ಯಾವ ಲಾಭವೂ ಆಗುವುದಿಲ್ಲ'(ರಾಹ್‌ಭೀತಿ, ಪುಟ-೧೪೮). ಈ ದೇಶಗಳಷ್ಟೇ ಅಲ್ಲ, ಇತ್ತೀಚೆಗೆ ರಷ್ಯಾದಲ್ಲೂ ವಿಶ್ವಧರ್ಮ ಸಮ್ಮೇಳನ ನಡೆಯಿತು. ಧರ್ಮದ ಮೂಲಕ ಮಾನವ ಸಂಬಂಧಗಳಲ್ಲಿರುವ ಮತೀಯ ದುರ್ಭಾವನೆಗಳನ್ನು ತೊಡೆದು ಹಾಕುವ ಪ್ರಯತ್ನ ಇಲ್ಲಿ ನಡೆಯುತ್ತದೆ ಎಂಬುದು ಸುಸ್ಪಷ್ಟ.

ಸಮಾಜವಾದೀ ದೇಶಗಳಲ್ಲಿ ವಾಮ ಸಂಸ್ಕೃತಿಯನ್ನು ನಿರ್ಮಿಸಲು ಮನೋವೈಜ್ಞಾನಿಕ ಪದ್ಧತಿಗಳನ್ನು ಬಳಸಲಾಗುತ್ತದೆ. ಜನಸಂವಹನ ಸಾಧನಗಳನ್ನು ಜನವಾದಿಯಾಗಿರುವ ಪ್ರಕ್ರಿಯೆ ಇದರಲ್ಲಿದೆ. ಪಾಠಶಾಲೆಗಳಲ್ಲಿ ಕ್ರಿಯಾತ್ಮಕ ಶಿಕ್ಷಣವನ್ನು ನೀಡಲಾಗುತ್ತದೆ. ಸಾಮೂಹಿಕ ಜೀವನ ನಡೆಸಲು ತಯಾರಿ ನೀಡಲಾಗುತ್ತಿದೆ. ರಂಗಮಂಚ ಮತ್ತು ಮನೋರಂಜನೆಯ ಸಾಧನೆಗಳು ನಿರ್ದಿಷ್ಟ ಗುರಿಯನ್ನುಳ್ಳವುಗಳು. ಅರಾಜಕ ಪ್ರವೃತ್ತಿಗಳಿಂದ ಬಿಡುಗಡೆ ಪಡೆಯುವ ಪ್ರಯತ್ನವನ್ನು ಅಲ್ಲಿನ ಶಿಕ್ಷಣ ಮಾಡುತ್ತಿದೆ. ನಿಸರ್ಗ ರಮಣೀಯ ಸ್ಥಳಗಳನ್ನು ಜನರ ಸೌಲಭ್ಯಗಳೊಂದಿಗೆ ಹೊಂದಿಸಲಾಗುತ್ತಿದೆ. ಸಾಧ್ಯವಾದಲ್ಲೆಲ್ಲಾ ಇಂತಹ ಕಡೆ ಆರೋಗ್ಯ ಕೇಂದ್ರಗಳನ್ನು ತೆರೆಯಲಾಗಿದೆ. ಇಂತಹ ಕೇಂದ್ರಗಳಲ್ಲಿ ಕಡ್ಡಾಯವಾಗಿ ಇದ್ದು ಬರಬೇಕಾದಂತಹ ವ್ಯವಸ್ಥೆಯನ್ನು ರೂಪಿಸಲಾಗಿದೆ. ಯಶಪಾಲರು ರಷ್ಯಾ, ಜೆಕ್ ಮತ್ತು ಪೂರ್ವ ಜರ್ಮನಿಯ ಪ್ರವಾಸವನ್ನು ಬಹಳ ಮನಸ್ಸಿಟ್ಟು ಮಾಡಿ ಬಂದಿದ್ದಾರೆ. ಈ ಕಾರಣದಿಂದಲೇ ಅವರು ಅಲ್ಲಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗಳನ್ನು ಸಮೀಪದಿಂದ ಕಾಣಲು ಸಾಧ್ಯವಾಗಿದೆ. ಅಕ್ಟೋಬರ್ ಕ್ರಾಂತಿಯ ಪ್ರಭಾವ ಹಾಗೂ ಮೇ ಒಂದರ ಬಗ್ಗೆ ಆಸ್ಥೆ ಜನರ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿ ಸೇರಿಹೋಗಿವೆ.

ಸಮಾಜವಾದಿ ದೇಶಗಳ ಆರೋಗ್ಯ ಕೇಂದ್ರಗಳು ಮತ್ತು ವಿಶ್ರಾಂತಿ

ಕೇಂದ್ರಗಳು ಬಂಡವಾಳಶಾಹಿ ದೇಶಗಳಲ್ಲಿನಂತೆ ಕೇವಲ ಕೆಲವರ ಪಾಲಿಗೆ ಮೀಸಲಾಗಿಲ್ಲ. ಎಲ್ಲರಿಗೂ ಲಭ್ಯವಿದೆ. ಹತ್ತು ತಿಂಗಳ ದುಡಿಮೆಯ ನಂತರ ಎರಡು ತಿಂಗಳ ಕಡ್ಡಾಯ ರಜವನ್ನು ಜನರು ಇಲ್ಲಿಯೇ ಕಳೆಯುತ್ತಾರೆ. ಮಾಸ್ಕೋದಲ್ಲಿ ಯಶಪಾಲ್ ಮತ್ತು ಅವರ ಪತ್ನಿ ಆರೋಗ್ಯ ಸುಧಾರಣೆಗೆಂದು ಹೋಗಿದ್ದ 'ಸೂಚೀ' ಆರೋಗ್ಯಧಾಮವಿದೆ. ಇಲ್ಲಿ ಮನರಂಜನೆ ಸಿಗುತ್ತದೆ. ಜಡ್ಡು ದೂರಾಗುತ್ತದೆ. ಇದು ಸುಂದರವಾದ ವಸತಿಗೃಹಗಳ ಸಂಕುಲ. ಇದರಲ್ಲಿ ೫೨ ಆರೋಗ್ಯ ಕೇಂದ್ರಗಳಿವೆ. ೩೦೦ ಹೋಟೆಲುಗಳಿವೆ. ತಂಗಲು ವಸತಿಗಳಿವೆ. ಪ್ರವಾಸಿಗರನ್ನು ಸೆಳೆವ ಸ್ಥಾನಗಳಿವೆ. ಇಲ್ಲಿಗೆ ಶ್ರಮಜೀವಿಗಳು ಮತ್ತು ವಿದೇಶೀ ಪ್ರವಾಸಿಗರು ವಿಶ್ರಾಂತಿಗೆಂದು ಬರುತ್ತಾರೆ. ಜನಶಾಸನವಿರುವ ದೇಶಗಳಲ್ಲಿ ಇಂತಹ ಸಾರ್ವಜನಿಕ ವಿಶ್ರಾಂತಿ ತಾಣಗಳು ಮತ್ತೆಲ್ಲೂ ಇರುವ ಉದಾಹರಣೆ ಸಿಗುವುದಿಲ್ಲ. ರಷ್ಯಾದಲ್ಲಿ ಲೆನಿನ್ನರ ಸಮಾಧಿ ಇರುವ ಪ್ರದೇಶ ನೋಡುವಂತಹುದು. ಅಧ್ಯಯನ, ಮನನ ಮತ್ತು ಸ್ವವಿಮರ್ಶೆಯ ಗುಣಗಳು ಅಲ್ಲಿನ ಜನಗಳಲ್ಲಿ ಬೆಳೆದು ಬಂದಿದೆ. ಸರ್ಕಾರದ ಆಡಳಿತವನ್ನು ರಚನಾತ್ಮಕವಾಗಿ ವಿಮರ್ಶಿಸುವ ಅಧಿಕಾರ ಅಲ್ಲಿನ ಜನರಿಗಿದೆ. ಅಲ್ಲಲ್ಲಿ ಗ್ರಂಥಾಲಯಗಳಿವೆ. ಉತ್ತಮ ಪುಸ್ತಕಗಳನ್ನೋದುವ ನಿಷ್ಠ ಓದುಗರಿದ್ದಾರೆ. ವಿದೇಶೀ ಲೇಖಕರ ಉತ್ತಮ ಪುಸ್ತಕಗಳನ್ನು ಅನುವಾದ ರೂಪದಲ್ಲೋ ಅಥವಾ ಆ ಭಾಷೆಯನ್ನು ಕಲಿತೋ ಓದುತ್ತಾರೆ. ಪ್ರಪಂಚದ ಜನಗಳಿಂದ ಸೋವಿಯತ್ ಜನತೆಗೆ ಕೊಡಲ್ಪಟ್ಟ ಬಳುವಳಿಗಳ ಒಂದು ಸಂಗ್ರಹಾಲಯವಿದೆ. ಇಲ್ಲಿ ಭಾರತದ ವತಿಯಿಂದ ಕಾನ್‌ಪುರ್ ಟ್ರೇಡ್ ಯೂನಿಯನ್ ಮೂಲಕ ಕೊಡ ಮಾಡಿರುವ ಕೆಂಪು ನಿಶಾನೆ ಮತ್ತು ಅಕ್ಕಿಕಾಳಿನ ಮೇಲೆ ಬಿಡಿಸಿರುವ ಲೆನಿನ್ನರ ರೇಖಾಚಿತ್ರ ಇವೆ. ಮಾನವೀಯ ಆವಶ್ಯಕತೆಗಳ ಬಗ್ಗೆ ಅಲ್ಲಿನವರಲ್ಲಿ ಕಾಳಜಿ ಇದೆ. ಒಮ್ಮೆ ಶಿಷ್ಟ ಮಂಡಲಿಯಲ್ಲಿ ಬಂದಿದ್ದವರಲ್ಲಿ ಒಬ್ಬರ ತಲೆಯ ಮೇಲೆ ಟೋಪಿ ಇಲ್ಲವಾಗಿತ್ತು. ಆಗ ಚಳಿ ಬಹಳವಾಗಿತ್ತು. ಒಬ್ಬ ಮಹಿಳೆ ಬಾಯಿಂದ ಹೇಳದೆ ಒಂದಿಷ್ಟು ರೂಬೆಲ್ಲುಗಳನ್ನು ಆ ಸದಸ್ಯರ ಜೇಬಿಗೆ ಹಾಕಿ ಹೊರಟು ಹೋದರು. ಆತ ಟೋಪಿ ಕೊಂಡುಕೊಳ್ಳಲಿ ಎಂಬುದೇ ಅವಳ ಉದ್ದೇಶ. ಭಾರತದಿಂದ ಅಲ್ಲಿಗೆ ಹೋಗಿ ಸ್ವಾರ್ಥವಶರಾಗಿ ತಮ್ಮ ಪ್ರಭಾವವನ್ನು ಮೂಡಿಸಲಾಗದೆ ಮರಳಿದ ಜನಗಳ ಬಗ್ಗೆ ಯಶಪಾಲರು ವ್ಯಂಗ್ಯವಾಡಿದ್ದಾರೆ. ಶ್ರೀಮತಿ ವಿಜಯಲಕ್ಷ್ಮೀ ಪಂಡಿತ್ ಅವರಿಗೆ ಸೋವಿಯತ್ ವ್ಯವಸ್ಥೆಯ ಬಗ್ಗೆ ಆಸ್ತೆ ಇರದಿದ್ದ ಕಾರಣ ಅವರು ರಾಜದೂತ ಹುದ್ದೆಯಲ್ಲಿದ್ದಾಗ ಸ್ವಿಟ್ಜರ್‌ಲ್ಯಾಂಡಿನಿಂದ ಬೆಲೆಬಾಳುವ ಫರ್ನಿಚರ್ ತರಿಸಿದ್ದರು. ಆದರೆ ಅಂತಹ ಫರ್ನಿಚರ್ ರಷ್ಯಾ ದೇಶದಲ್ಲೇ ಬಹು ಅಗ್ಗವಾಗಿ ಸಿಗುತ್ತಿತ್ತು.

ಪೂರ್ವ ಹಾಗೂ ಪಶ್ಚಿಮ ಜರ್ಮನಿಗಳನ್ನು ಒಂದು ಕೃತಕ ರೇಖೆ ಬೇರ್ಪಡಿಸಿದೆ. ಒಂದು ಕಡೆ ಬಂಡವಾಳಶಾಹಿ ಆಡಳಿತ ವ್ಯವಸ್ಥೆ ಇದ್ದರೆ,

ಇನ್ನೊಂದು ಕಡೆ ಜನವರ ಆಡಳಿತವಿದೆ. ಬರ್ಲಿನ್ ನಗರ ಎರಡು ದೇಶಗಳಿಗೆ ಹಂಚಿ ಹೋಗಿವೆ. ಅನುಮತಿ ಪತ್ರ ಪಡೆದಿದ್ದರೆ ಕಾರಿನಲ್ಲಿ ಆ ಕಡೆ ಈ ಕಡೆ ಹೋಗಿ ಬರಬಹುದು. ಪೂರ್ವಭಾಗವನ್ನು ನಾಜಿಗಳು ಪಾಳುಗೆಡವಿದ್ದರು. ಅದರ ಅವಶೇಷಗಳು ಇನ್ನು ಇಲ್ಲಿವೆ. ಪಶ್ಚಿಮ ಜರ್ಮನಿಯಲ್ಲಿ ಬಂಡವಾಳಶಾಹಿ ಉಳಿದಿರಲೆಂದು ಅಮೆರಿಕಾ ನೂರಾರು ಕೋಟಿ ಡಾಲರುಗಳನ್ನು ಖರ್ಚು ಮಾಡುತ್ತಿದೆ. ಕಮ್ಯೂನಿಜಂ ಅನ್ನು ತಡೆಯಲು ಅವರಿಗಿರುವ ವಿಕಲ್ಪ ಇದೊಂದೇ. ಪಶ್ಚಿಮ ಜರ್ಮನಿಗೆ ವಲಸೆ ಹೋದವರಲ್ಲಿ ಹೆಚ್ಚಾಗಿ ದೊಡ್ಡ ಜಮೀನುದಾರರು, ಕಾರ್ಖಾನೆಗಳ ಮಾಲೀಕರು ಮತ್ತು ಧನಾಢ್ಯರು. ಪೂರ್ವ ಭಾಗದಲ್ಲಿ ಕಾರ್ಮಿಕರು, ಕಲಾಕಾರರು ಮತ್ತು ಲೇಖಕರು ಉಳಿದುಕೊಂಡರು. ತರುವಾಯದಲ್ಲಿ ಪೂರ್ವ ಜರ್ಮನಿಯ ಸರ್ಕಾರವು ದುಡಿಯುವ ಜನರ ಸಹಕಾರದಿಂದ ಅತ್ಯಲ್ಪ ಕಾಲದಲ್ಲಿ ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಿತು. ಇದು ಪಶ್ಚಿಮ ಜರ್ಮನಿಗೆ ಸಹ್ಯವಾಗಲಿಲ್ಲ. ಪೂರ್ವ ಹಾಗೂ ಪಶ್ಚಿಮದ ನಾಣ್ಯಗಳು ಮಾರ್ಕ್. ಆದರೆ ಆಕಾರದಲ್ಲಿ ಬೇರೆ ಬೇರೆಯಾಗಿವೆ. ಪಶ್ಚಿಮದ ಬಂಡವಾಳಶಾಹಿಗಳು ಪೂರ್ವದ ಮಾರ್ಕಿನ ಬೆಲೆಯನ್ನು ಬೀಳಿಸಲು ಬಹಳಷ್ಟು ಪ್ರಯತ್ನ ಮಾಡುತ್ತಾರೆ. ಪಶ್ಚಿಮದ ಬ್ಯಾಂಕಿನಲ್ಲಿ ಒಂದು ಪೌಂಡ್‌ಗೆ ಬದಲಾಗಿ ಹನ್ನೆರಡು ಪಶ್ಚಿಮದ ಮಾರ್ಕುಗಳು ಸಿಗುತ್ತವೆ. ಅಲ್ಲಿ ಅಂಗಡಿಯವರು ಹನ್ನೆರಡು ಪಶ್ಚಿಮದ ಮಾರ್ಕಿಗೆ ಬದಲಾಗಿ ನಲವತ್ತೆಂಟು ಪೂರ್ವೀ ಮಾರ್ಕುಗಳನ್ನು ಕೊಡುತ್ತಾರೆ. ಹೀಗಾಗಿ ಪಶ್ಚಿಮದಿಂದ ಪೂರ್ವೀ ಮಾರ್ಕು ತಂದು ಮತ್ತೆ ಪೂರ್ವ ಜರ್ಮನಿಯಲ್ಲಿ ಪದಾರ್ಥಗಳನ್ನು ಕೊಂಡರೆ ಹೆಚ್ಚು ಲಾಭವಾಗುತ್ತದೆ. ಈ ವ್ಯವಹಾರದಿಂದ ಪೂರ್ವ ಜರ್ಮನಿಯಲ್ಲಿ ಪದಾರ್ಥಗಳ ಕೊರತೆ ಏರ್ಪಡುತ್ತದೆ. ಇಂತಹ ದುಃಸ್ಥಿತಿಗೆ ಬಂಡವಾಳಶಾಹಿ ಪಿತೂರಿಯೇ ಕಾರಣ. ಶಿಕ್ಷಣದ ಮಟ್ಟ, ಪದಾರ್ಥಗಳ ಬೆಲೆ, ಅಭಿವೃದ್ಧಿಯ ಅವಕಾಶಗಳು, ಮಾನವೀಯ ನಡಾವಳಿ, ಆಚಾರ-ವಿಚಾರ, ಆಟಪಾಟ ಮೊದಲಾದವುಗಳಲ್ಲಿ ಎರಡನ್ನೂ ಹೋಲಿಸಿ ನೋಡಿ ಎಂದು ಕೂಗೆಬ್ಬಿಸುತ್ತಾರೆ. ಪೂರ್ವ ಜರ್ಮನಿಯ ಪ್ರಗತಿಯನ್ನು ಕಂಡು ಆ ದೇಶದ ಮೇಲೆ ಗುಪ್ತಚರ್ಯೆ ನಡೆಸಲು ಪಶ್ಚಿಮ ಜರ್ಮನಿಯ ರಾಡಾರ್ ಸ್ಟೇಷನ್ನಿನಿಂದ ಪೂರ್ವ ಜರ್ಮನಿಯ ಟೆಲಿಫೋನ್ ಕೇಬಲ್‌ಗಳ ವರೆಗೂ ಸುರಂಗಗಳನ್ನು ಹಾಕಿದ್ದರು. ಆ ದೇಶದ ಎಲ್ಲ ಚಟುವಟಿಕೆಗಳು ತಮಗೆ ತಿಳಿದಿರಲಿ ಎಂಬುದೇ ಈ ಪಿತೂರಿಯ ಉದ್ದೇಶ. ಈ ಸುರಂಗವನ್ನು ಕಂಡು ಹಿಡಿದು ಬಯಲು ಮಾಡಿದಾಗ ಅಮೆರಿಕಾದ ಘನತೆಗೆ ಧಕ್ಕೆ ಉಂಟಾಯಿತು. ಈಗಲೂ ಅಲ್ಲಿನ ಜನತೆಗೆ ಒಂದು ಭಾಗದವರನ್ನು ಕಂಡರೆ ಇನ್ನೊಂದು ಭಾಗದವರಿಗೆ ಆತ್ಮೀಯತೆ ಇದೆ. ಆದುದರಿಂದಲೇ ಏಕೀಕರಣವಾಗಲಿ ಎಂಬ ಕೂಗೇಳುತ್ತದೆ. ಆದರೆ ಈ ಕೆಲಸ ಅಷ್ಟು ಸುಲಭವಾದುದಲ್ಲ.

'ಮಾರಿಶಸ್'ನ ಪ್ರವಾಸದ ವರ್ಣನೆಗಳು ಕಾವ್ಯಾತ್ಮಕವಾಗಿವೆ. ವಾಸ್ತವವಾಗಿ ಆ ದೇಶವೂ ಒಂದು ಗೀತಕಾವ್ಯದಂತಹ ಚೌಕಟ್ಟು ಹಾಗೂ ವಿಲಕ್ಷಣವೆನಿಸುವ ಸೌಂದರ್ಯವನ್ನು ಪಡೆದುಕೊಂಡಿದೆ. ಅದನ್ನು ಒಂದು ನಗರವೆನ್ನುವುದಕ್ಕಿಂತಲೂ ನಗರಗಳ ಸಮೂಹ ಎನ್ನಬೇಕು. ನಾಮಕರಣ ಬೇರೆ ಬೇರೆ - ಮಾಕೋಮಾ, ಗ್ರಾವಾಸೇ, ಪೋರ್ಟ್‌ಲೂಈ, ಕೇರ್‌ಪಿಯು, ಕಾತ್ರಬೋನ್, ರೋಜ್‌ಲ್ ಹಾಗೂ ಬೋವಾರಿಸೇ ಹೀಗೆ. ಮಾರಿಶಸ್‌ನ ಇತಿಹಾಸವನ್ನು ತಿಳಿಯುವುದು ಸುಲಭವೇ. ಕ್ರಿ.ಪೂ. ಮೂರನೆಯ ಶತಮಾನದಿಂದ ಈ ದ್ವೀಪದ ಇರುವಿಕೆ ತಿಳಿದು ಬಂದಿದೆ. ಆದರೆ ಹದಿನಾರನೆಯ ಶತಮಾನದಲ್ಲಿ ವಾಸ್ಕೋಡಿಗಾಮಾ ಇದನ್ನು ಕಂಡು ಹಿಡಿದ ನಂತರವೇ ಇದರ ಇತಿಹಾಸದ ಇರವು ನಮಗಾದದ್ದು ಎಂದು ಇತಿಹಾಸಕಾರ ಪ್ಲನೀ ಬರೆಯುತ್ತಾನೆ. ಈ ದ್ವೀಪಕ್ಕೆ ಕ್ರಮವಾಗಿ ಪೋರ್ಚುಗೀಸರು, ಸ್ಪೇನಿಯರು, ಡಚ್ಚರು, ಫ್ರೆಂಚರು ಹಾಗೂ ಇಂಗ್ಲಿಷರು ವಲಸೆ ಬಂದರು. ಇದನ್ನು ಸ್ವತಂತ್ರಗೊಳಿಸಲೆಂದು ಸಾಮ್ರಾಜ್ಯವಾದಿ ಶಕ್ತಿಗಳು ಬೇರೆಯ ಪಸಾಹತುಗಳಿಂದ ಇಲ್ಲಿಗೆ ಗುಲಾಮರನ್ನು ಕಳುಹಿಸಿದವು. ಹೀಗೆ ಇಲ್ಲಿಗೆ ಬಂದವರು ಬೆವರು ಸುರಿಸಿ ದುಡಿದು ಇಲ್ಲಿ ಕಬ್ಬನ್ನು ಬೆಳೆದರು. ಹಣ್ಣು ಮತ್ತು ತರಕಾರಿಗಳನ್ನು ಬೆಳೆದರು. ಇಂಗ್ಲಿಷರು ನೂರು ವರ್ಷ ಪರ್ಯಂತ ಇಲ್ಲಿ ಗುಲಾಮತನವನ್ನು ಉಳಿಸಿಬಿಟ್ಟರು. ಮಹಾತ್ಮಾ ಗಾಂಧೀಜಿ ಮಾರಿಶಸ್‌ಗೆ ಭೇಟಿ ನೀಡಿದ್ದರಿಂದ ಹಾಗೂ ಡಾ. ಮುನ್ನೀಲಾಲ್ ಅವರ ಪ್ರೇರಣೆಯಿಂದ ಅಲ್ಲದೇ ಶಿವಸಾಗರ್ ರಾಮ್‌ಗುಲಾಮ್ ಅವರು ನಡೆಸಿದ ಹೋರಾಟ ಹಾಗೂ ನೀಡಿದ ಮುಂದಾಳುತನದಿಂದ ಮಾರ್ಚ್ ೧೨, ೧೯೬೮ ಕ್ಕೆ ಈ ದೇಶ ತನ್ನದೇ ಆದ ಸರ್ಕಾರವನ್ನು ರಚಿಸಿಕೊಂಡಿತು. ಇಲ್ಲಿ ಅನೇಕ ಜಾತಿಗಳವರಿದ್ದಾರೆ. ಅನೇಕ ಭಾಷೆಗಳನ್ನಾಡುತ್ತಾರೆ. ಜನರು ಮಿಶ್ರ ಕುಲಕ್ಕೆ ಸೇರಿದವರು. ಏಕೆಂದರೆ ಗುಲಾಮರ ಅವ್ಯವಸ್ಥಿತ ಜೀವನ ರೀತಿಗಳು ಮತ್ತು ಅವರ ಹೆಂಗಸರನ್ನು ಮಾಲೀಕರು ಅನೈತಿಕವಾಗಿ ಉಪಯೋಗಿಸಿಕೊಂಡದು ಇದಕ್ಕೆ ಕಾರಣ. ಇಲ್ಲಿನ ಹೆಚ್ಚು ಜನ ಭಾರತೀಯರು, ಈ ಕಾರಣ ಹಿಂದಿ ಮಾತನಾಡುತ್ತಾರೆ. ರಾಮಾಯಣ, ಮಹಾಭಾರತ ಮತ್ತು ಭಗವದ್ಗೀತೆಯ ಮೂಲಕ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡಿದ್ದಾರೆ. ಭಾರತದಂತೆ ಇಲ್ಲೂ ಆರ್ಯಸಮಾಜ ಹಾಗೂ ಹಿಂದೂ ಸಭೆಗಳಿವೆ. ಆದರೆ ಅವುಗಳ ಚಟುವಟಿಕೆಗಳು ಬೇರೆಯ ತೆರನಾದವು. ಹಿಂದೀ ಸಾಹಿತ್ಯ ಸಮ್ಮೇಳನದ ಪರೀಕ್ಷೆಗಳು ಇಲ್ಲಿ ನಡೆಯುತ್ತವೆ. ಬೇರೆ ಬೇರೆ ಸಾಂಸ್ಕೃತಿಕ ಪ್ರವಾಹಗಳಿಗೆ ಸೇರಿದವರು ಇಲ್ಲಿದ್ದರೂ ಜನಗಳಲ್ಲಿ ಒಗ್ಗಟ್ಟಿದೆ. ಜನಸಾಮಾನ್ಯರ ಒಲವು ವಾಮಪಂಥದ ಕಡೆಗಿದೆ. ಇದಕ್ಕೆ ಕಳೆದ ಚುನಾವಣೆಗಳೇ ಸಾಕ್ಷಿ. ಮಾರಿಶಸ್‌ನಲ್ಲಿ ಹಿಂದೀ ಶರವೇಗದಲ್ಲಿ ಬೆಳೆಯುತ್ತಿದೆ. ಭಾರತೀಯ ಯಾತ್ರಾ ಸ್ಥಳಗಳಾದ ತ್ರಿವೇಣಿ ಮತ್ತು ಚಿತ್ರಕೂಟಗಳನ್ನು ಇಲ್ಲಿ ಸಾಂಕೇತಿಕವಾಗಿ ಸ್ಥಾಪಿಸಿಕೊಂಡಿದ್ದಾರೆ. ಯಶಪಾಲರು ಮಾರಿಶಸ್‌ನ ಹಲ ಕೆಲವು ಲೇಖಕರ ಹೆಸರನ್ನು ಉಲ್ಲೇಖಿಸಿದ್ದಾರೆ.

ಅವರಲ್ಲಿ ಅಭಿಮನ್ಯು ಅನತ್, ನಂದಲಾಲ್, ಸೋಮದತ್ತ ಬಖೌರೀ, ವಿಷ್ಣುದಯಾಳ್ ಇವರು ಮುಖ್ಯರು. ಈ ಎಲ್ಲ ಲೇಖಕರ ಸಂಘಟಿತ ವೇದಿಕೆಯೇ 'ಹಿಂದಿ ಲೇಖಕ ಸಂಘ'. ಈ ಸಂಘದ ವತಿಯಿಂದ ಅವರ ಭಾಷಣಗಳನ್ನು ಏರ್ಪಡಿಸಿದ್ದರು. ಒಂದು ಗೋಷ್ಠಿಯಲ್ಲಿ ಬದ್ಧತೆಯ ಬಗ್ಗೆ ಚರ್ಚೆ ನಡೆಯಿತು.

ಲೇಖಕ ಆತ್ಮತೃಪ್ತಿಗಾಗಿ ಸ್ವಯಂಸ್ಫೂರ್ತಿಯಿಂದ ಬರೆಯುತ್ತಾನೆಯೇ ಅಥವಾ ಉದ್ದೇಶ್ಯ ಸಾಧನೆಗೆಂದು ಬರೆಯುತ್ತಾನೆಯೇ ? ಅವನ ರಾಜಕೀಯ ಬದ್ಧತೆಯ ಉದ್ದೇಶವೇನು ? ಎಂಬುದನ್ನು ಕುರಿತು ಲೇಖಕರು ತಮ್ಮ ಜಿಜ್ಞಾಸೆಯನ್ನು ಯಶಪಾಲರ ಮುಂದಿಟ್ಟರು. ಸಮಾಜಕ್ಕೆ ಅಂಟಿಕೊಂಡಿರುವ ಕಾರಣದಿಂದಲೇ ಕಲಾವಿದ ವಿಚಾರ ಮಾಡುತ್ತಾನೆ ಮತ್ತು ಅವನ ಕಲ್ಪನೆ ಅರಳುತ್ತದೆ ಎಂದು ಯಶಪಾಲರು ಉತ್ತರಿಸಿದರು "ಲೇಖಕನ ಸ್ವಾಂತಃಸುಖಾಯ ಎಂಬ ತೃಪ್ತಿಯೂ ಸಾಮಾಜಿಕ ಭಾವನೆ ಹಾಗೂ ಸಾಮಾಜಿಕ ತೃಪ್ತಿ ಇಂದ ಬೇರಾಗಿಯಾಗಲಿ ಅದಕ್ಕೆ ವಿರುದ್ಧವಾಗಿಯಾಗಲಿ ಇರಲು ಸಾಧ್ಯವಿಲ್ಲ... ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಪ್ರಭುತ್ವವು ಜನಹಿತಕ್ಕೆ ಜವಾಬ್ದಾರವಾಗಿರಬೇಕು ಎಂದು ಒಪ್ಪಿಕೊಂಡಾಗ ವ್ಯಕ್ತಿಗತ ಅಥವಾ ಸಾಮಾಜಿಕ ಜೀವನದ ಯಾವ ಪಕ್ಷ ತಾನೇ ರಾಜಕೀಯದ ಪರಿಧಿಯಿಂದ ಹೊರಗುಳಿದಿರಲು ಸಾಧ್ಯ ?...... ಸಮಾಜದಲ್ಲಿ ಸೂಕ್ತವಾದ ವ್ಯವಸ್ಥೆ ಇರಲಿ ಎನ್ನುವ ಎಚ್ಚರವೇ ರಾಜಕೀಯ ಬದ್ಧತೆಯಾಗುತ್ತದೆ" (ಸ್ವರ್ಗೋದ್ಯಾನ್, ಬಿನಾ ಸಾಂಪ್, ಪುಟ ೭೭-೭೮) ಭಾಷೆ, ಪ್ರಕಾರಗಳು, ವಸ್ತು ಹಾಗೂ ಶೈಲಿಯ ಬಗ್ಗೆ ಯಶಪಾಲರು ತಮ್ಮ ಅಭಿಪ್ರಾಯಗಳನ್ನು ಪ್ರಕಟಗೊಳಿಸುತ್ತಾ "ಲೇಖಕನು ಜನಸಾಮಾನ್ಯರಿಗಾಗಿ ಬರೆಯುತ್ತಾನೆ, ಅಂದ ಮೇಲೆ ದರಬಾರೀ ಸಂಸ್ಕೃತಿಯಿಂದ ಬಿಡುಗಡೆ ಪಡೆದು ಜನಸಾಮಾನ್ಯರ ಪರಿವೇಶದಿಂದಲೇ ವಸ್ತು ಮತ್ತು ಭಾಷೆಯನ್ನು ಆರಿಸಿಕೊಂಡಾಗಲೇ ಭಾಷೆ ಮತ್ತು ಸಾಹಿತ್ಯ ಯಥಾರ್ಥವಾಗುವುದು" ಎಂದರು.

ಒಮ್ಮೆ ಯಶಪಾಲ್ ಅವರು ತಾಶ್‌ಕಂದ್‌ಗೆ, . ಏಷ್ಯಾ, ಆಫ್ರಿಕಾ ಲೇಖಕ ಕಾಂಗ್ರೆಸ್ಸಿಗೆ ಭಾರತೀಯ ಪ್ರತಿನಿಧಿ ಮಂಡಳದ ಜೊತೆ ಹೋಗಿದ್ದರು. ಸಭೆಯಲ್ಲಿ ಮಕ್ಕಳು ವೇದಿಕೆಯಿಂದ ಬರಹಗಾರರಿಗೆ ಸ್ವಾಗತ ಕೋರುತ್ತಾ "ಪ್ರಪಂಚದ ಎಲ್ಲ ಮಕ್ಕಳ ವಿಕಾಸದಲ್ಲಿ ನೆರವಾಗುವ, ಅವರನ್ನು ಪ್ರೋತ್ಸಾಹಿಸುವ ಹಾಗೂ ವಿಶ್ವಪ್ರೇಮ ಮತ್ತು ವಿಶ್ವಶಾಂತಿಯ ಭಾವನೆಗಳನ್ನು ಹರಡುವಂತಹ ಸ್ವಾರಸ್ಯಕರವೂ, ಬೋಧಪ್ರದವೂ ಆದ ಕೃತಿಗಳನ್ನೇ ರಚಿಸಿರಿ" ಎಂದರು (ದೀದೀಜಿ ಕಹತೀ ಹೈ ಮೇರಾ ಚೆಹರಾ ರೋಬೀಲಾ ಹೈ, ಪುಟ-೮೧).

ಪ್ರಪಂಚವನ್ನು ವಿನಾಶದಿಂದ ಉಳಿಸುವ ಪ್ರಶ್ನೆ ಕೇವಲ ರಾಜಕೀಯವಾದುದಲ್ಲ. ಸಾಂಸ್ಕೃತಿಕವಾದುದೂ ಹೌದು ಎಂಬುದು ಸುಸ್ಪಷ್ಟ. ಈ ಯುಗದ ಭಾರತೀಯ ಲೇಖಕರು ಇಂತಹ ಪ್ರಶ್ನೆಗಳನ್ನೆತ್ತಿಕೊಂಡು ತಲೆ

ಕೆಡಿಸಿಕೊಳ್ಳುವುದೇ ಇಲ್ಲ, ಇದು ಈ ಪ್ರತಿನಿಧಿ ಮಂಡಳದ ಮುಂದಾಳು ತಾರಾಶಂಕರ ವಂದೋಪಾಧ್ಯಾಯರ ಅಭಿಪ್ರಾಯವೂ ಆಗಿತ್ತು. ಸಾಹಿತ್ಯ ಮತ್ತು ಕಲೆಯ ಮೂಲಕವೂ ಮಾನವನ ವಿಕಾಸ, ರಾಷ್ಟ್ರಗಳ ಪೂರ್ಣ ಸ್ವಾತಂತ್ರ್ಯ ಹಾಗೂ ವಸಾಹತುವಾದೀ ದಬ್ಬಾಳಿಕೆಯಿಂದ ಬಿಡುಗಡೆ ಹೊಂದಬೇಕೆಂಬ ವಿಚಾರಗಳಲ್ಲಿ ರಾಜಕೀಯದ ದುರ್ನಾತವಿದೆ, ಆದುದರಿಂದ ಈ ಠರಾವಿಗೆ ಸಂಶೋಧನೆ ತರುತ್ತಿದ್ದೇವೆ ಎಂದು ಬರಹಗಾರರ ಜಂಟೀ ಹೇಳಿಕೆಯಲ್ಲಿ ಸ್ಪಷ್ಟಗೊಳಿಸಲಾಯಿತು. ಏಷಿಯಾ ಮತ್ತು ಆಫ್ರಿಕಾದ ಪ್ರತಿನಿಧಿಗಳು ಇದನ್ನು ತಿರಸ್ಕರಿಸಿದರು. ಭಾರತದ ಲೇಖಕರಂತೂ ಈ ಠರಾವನ್ನು ಕಂಡು ಆಶ್ಚರ್ಯ ವ್ಯಕ್ತಪಡಿಸಿದರು. ಭಾರತೀಯ ಲೇಖಕರು ಈ ಠರಾವನ್ನು ತಟಸ್ಥ ನೀತಿಗೆ ವಿರುದ್ಧವಾಗಿದೆ ಎಂದರು. ಹೀಗೆ ನಾವು ಅಮೆರಿಕಾವನ್ನು ತೆಗಳುತ್ತಿದ್ದೇವೆಂದು ಅವರ ಅನಿಸಿಕೆ ಆಗಿತ್ತು. ಉಳಿದ ದೇಶಗಳ ಬರಹಗಾರರು ಭಾರತೀಯ ಲೇಖಕರ ಬಗ್ಗೆ ವ್ಯಂಗ್ಯದ ಮಾತುಗಳನ್ನಾಡಿದರು. ಮುಲ್ಕ್‌ರಾಜ್ ಆನಂದ ಅವರು ಪರಿಸ್ಥಿತಿಯನ್ನು ಹೇಗೋ ಸಂಭಾಳಿಸಿದರು. ಕಡೆಗೆ 'ಕಾಂಗ್ರೆಸ್' ಹೀಗೆಂದು ನಿರ್ಣಯಿಸಿತು -"ಬಾಲಕರ ವಿಕಾಸದ ಅವಶ್ಯಕತೆಗಳಿಗನುಗುಣವಾಗಿ ವಿಭಿನ್ನ ರಾಷ್ಟ್ರಗಳು ಕಲಾತ್ಮಕ ಸಹಯೋಗದಿಂದ ಸಾಹಿತ್ಯವನ್ನು ಸೃಷ್ಟಿಸಲಿ. ಮಹಿಳೆಯರ ಕೊಡುಗೆಯನ್ನು ಗಣನೆಗೆ ತೆಗೆದುಕೊಂಡು ಮುಂದೆ ಅವರಿಂದ ಹೆಚ್ಚು ಸಹಕಾರ ದೊರೆಯುವ ತೆರದಲ್ಲಿ ಅವಕಾಶಗಳನ್ನು ಹೆಚ್ಚು ಮಾಡಲಿ. ಸಿನಿಮಾ ಮತ್ತು ರಂಗಮಂಚದ ಮೇಲೆ ಸಾಹಿತ್ಯದ ಪ್ರಭಾವ ಹೆಚ್ಚಲಿ. ನಾಟಕ ಕ್ಷೇತ್ರದಲ್ಲಿ ಅಂತರ್‌ರಾಷ್ಟ್ರೀಯ ಪ್ರಭಾವವನ್ನು ಬೆಳೆಸುವುದಾಗಲಿ, ಎಲ್ಲ ಭಾಷೆಗಳ ಉನ್ನತ ಮಟ್ಟದ ಸಾಹಿತ್ಯವು ಭಾಷಾಂತರಗೊಳ್ಳಲಿ". ಕಾರ್ಯಕ್ರಮಗಳೆಲ್ಲಾ ಮುಗಿದ ಮೇಲೆ ನನ್ನ ಗೆಳೆಯರ ಸಹಾಯದಿಂದ ಸಂಯುಕ್ತ ಕೃಷಿಕ್ಷೇತ್ರವನ್ನು ಸಂದರ್ಶಿಸಿ ಬರಲಾಯಿತು. ಸ್ಥಳೀಯರಲ್ಲಿ ಭಾರತದ ಬಗ್ಗೆ ಪ್ರೀತಿ ಇರುವುದು ಮತ್ತು ಭಾರತೀಯ ಲೇಖಕರ ಕೃತಿಗಳು ಅಲ್ಲಿ ಜನಪ್ರಿಯಗೊಂಡಿವೆ ಎಂಬುದು ಕಂಡುಬಂತು. ಇದು ಸಾಂಸ್ಕೃತಿಕ ಐಕ್ಯಕ್ಕೆ ಪುರಾವೆಗಳೇನೋ ಹೌದು. ಜೊತೆ ಜೊತೆಗೆ ಬೇರೆ ದೇಶದ ಜನರ ಬಗ್ಗೆ ಸೋವಿಯತ್ ಜನರ ಸಹಜ ಪ್ರೀತಿಯ ದ್ಯೋತಕವೂ ಹೌದು.

ಪರದೇಶದ ಪ್ರವಾಸಗಳಂತೆಯೇ ಯಶಪಾಲರ ದೇಶದೊಳಗಿನ ಬೇರೆ ಬೇರೆ ಭಾಗಗಳ ಪ್ರವಾಸವೂ ಬಹಳ ಮಹತ್ವದ್ದೇ. ಎಲ್ಲಕ್ಕಿಂತ ಹೆಚ್ಚು ಉಪಯುಕ್ತವೆನಿಸುವ ಪ್ರವಾಸ ಸೇವಾಗ್ರಾಮದಲ್ಲಿ ಗಾಂಧೀಜಿಯನ್ನು ಕಂಡದ್ದು; ಯಶಪಾಲರು ಗಾಂಧಿವಾದೀ ರಾಜನೀತಿ ಮತ್ತು ಸಿದ್ಧಾಂತಗಳೊಂದಿಗೆ ಎಂದಿಗೂ ಏಕೀಭವಿಸಿದ್ದವರಲ್ಲ. ಅವರು ಗಾಂಧೀಜಿ ಬಗ್ಗೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಾ 'ಗಾಂಧೀವಾದ್ ಕೀ ಶವ್ ಪರೀಕ್ಷಾ' ಬರೆದರು. ಗಾಂಧೀಜಿಯ ಆಶ್ರಮ ಹಾಗೂ ಅವರ ಅಹಿಂಸೆ, ಸದ್ವ್ಯವಹಾರ, ಸತ್ಯ ಮತ್ತು ಸರಳ ಜೀವನದ

ಸಿದ್ಧಾಂತಗಳನ್ನು ವ್ಯಾವಹಾರಿಕವಾಗಿ ಪರೀಕ್ಷಿಸಲು ಸೇವಾಗ್ರಾಮಕ್ಕೆ ಹೋದರು. ಗಾಂಧೀಜಿ ತಾವು ಮತ್ತು ತಮ್ಮ ಕಾರ್ಯಕರ್ತರು ಬಡವರಂತೆ ಇರಬಯಸುತ್ತೇವೆ ಎಂದು ಹೇಳುತ್ತಿದ್ದರು. ಅವರು ಯಂತ್ರಗಳ ಪ್ರಚಾರವೇ ಬಡತನಕ್ಕೆ ಕಾರಣವೆನ್ನುತ್ತಿದ್ದರು. ಯಶಪಾಲರು ತಮ್ಮ ಭೌತಿಕವಾದಿ ಸಿದ್ಧಾಂತಗಳಿಗನುಸಾರವಾಗಿ ವರ್ಗಭೇದಗಳೇ ಶೋಷಣೆ ಮತ್ತು ಬಡತನಕ್ಕೆ ಕಾರಣ ಎಂದು ನಂಬಿದ್ದರು. ಬಡವ ಸ್ವಇಚ್ಛೆಯಿಂದ ಬಡವನಲ್ಲ ಎಂಬುದನ್ನು ಅವರು ಅರಿತಿದ್ದರು. ಗಾಂಧೀಜಿಯ ಆಶ್ರಮದಲ್ಲಿ ಅವರ ಸಿದ್ಧಾಂತಗಳ ಫಲಿತಾರ್ಥ ಕಂಡು ಬರಲಿಲ್ಲ. ಗಾಂಧೀಜಿ ಇದ್ದ ಗುಡಿಸಲಿಗೆ ಏರ್ ಕಂಡೀಷನ್ ಯಂತ್ರವನ್ನು ಕೂಡಿಸಲು ಉಪ್ಯಗಿಸಲಾಗಿತ್ತು. ಅವರು ಯುದ್ಧ ವಿರೋಧಿ ಸತ್ಯಾಗ್ರಹದಲ್ಲಿ ಭಾಗವಹಿಸಬೇಕಾದರೆ ದೇವರಲ್ಲಿ ನಂಬಿಕೆ ಇಡಬೇಕೆಂಬ ನಿಬಂಧನೆಯನ್ನು ಒಡ್ಡಿದ್ದರು. ಅವರು ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಚಳುವಳಿಯನ್ನು ವ್ಯಕ್ತಿಗತ ಚಳುವಳಿಯಂತೆ ನಡೆಸುತ್ತಿದ್ದರು. ಮಾನವನ ಶಕ್ತಿಯನ್ನು ಈ ಕಾರಣ ಅವರು ದುರ್ಬಲವೆನ್ನುತ್ತಿದ್ದರು. ಮಾತುಕತೆ ನಡೆದಾಗ ಅವರು ಕಮ್ಯೂನಿಸ್ಟ್ ವಿರೋಧಿಗಳೆಂಬುದು ಸ್ಪಷ್ಟವಾಯಿತು. ಸಹನಶೀಲತೆಗೆ ಹೆಸರು ಪಡೆದಿದ್ದ ಗಾಂಧೀಜಿ ಚರ್ಚೆ ನಡೆದಾಗ ಸಿಟ್ಟಿಗೆದ್ದರು. ಬೀಳ್ಕೊಡಿಗೆಯ ನಮಸ್ಕಾರಕ್ಕೆ ಪ್ರತಿಕ್ರಿಯೆಯನ್ನೇ ತೋರಲಿಲ್ಲ. ಯಶಪಾಲರು ಈ ಭೇಟಿಯ ವಿವರಗಳನ್ನು 'ವಿಪ್ಲವ'ದಲ್ಲಿ ಛಾಪಿಸಿದಾಗ ತಮ್ಮ ವ್ಯಕ್ತಿಗತ ಭೇಟಿಯನ್ನು ಸಾರ್ವಜನಿಕವಾಗಿಸಿದರೆಂದು ಗಾಂಧೀಜಿ ಪ್ರತಿಕ್ರಿಯಿಸಿದರು. ಯಶಪಾಲರು ಗಾಂಧೀಜಿಯ ವಿಚಾರ ಹಾಗೂ ಉದ್ದೇಶಗಳ ನಡುವಿನ ಅಂತರ್ವಿರೋಧವನ್ನು ಬಹಿರಂಗಗೊಳಿಸಿ ಅವರ ವ್ಯಾವಹಾರಿಕ ಜೀವನದ ದೌರ್ಬಲ್ಯಗಳನ್ನು ಗುರುತಿಸಿ ಬರೆದರು.

'ಸಿಮ್ಲಾ ಸೆ ಕುಲ್ಲೂ', 'ಅಲ್ಮೋಡಾ ಔರ್ ನೈನಿತಾಲ್' -ಇವು ನಮ್ಮ ದೇಶದ ಮಲೆನಾಡ ನೈಜಚಿತ್ರಗಳು. 'ಸಿಮ್ಲಾ ಸೆ ಕುಲ್ಲೂ' ಪ್ರವಾಸದಲ್ಲಿ 'ನಾರ್‌ಕಂಡಾ', 'ಬಾಗೀ ಗಡ್‌ವಾಲ್', 'ಹಾಟೂ ಟಿಬ್ಬಾ', 'ಲೂರೀ', 'ಕುಮಾರ್‌ಸೇನ್', 'ಟವ್‌ನಾಗ್', 'ಅಣೀ', 'ಜುಲೋರೀ', 'ಬೀಜಾರ್', 'ಔಟ್ ಮತ್ತು ಕುಲ್ಲೂ' ಮೊದಲಾದ ಬಸತಿಗಳು. ಇವುಗಳಲ್ಲಿ ಅಲ್ಲಿನ ಜನ ಜೀವನದ ವರ್ಣನೆಯು ಜೊತೆಗೆ ಅವುಗಳ ನಡುವೆ ಹರಡಿಕೊಂಡಿರುವ ಇಂಗ್ಲಿಷರ ಮತ್ತು ಮಹಾರಾಜರ ವೈಭವೋಪೇತ ಜೀವನವನ್ನು ಕುರಿತು ಬರೆದಿದ್ದಾರೆ. ಇದರಲ್ಲಿ ಲೇಖಕರು ಕೆಲವು ಮುಖ್ಯ ವಿಷಯಗಳನ್ನೆತ್ತಿದ್ದಾರೆ. ಅವರಿಗೆ ಅಲ್ಲಿ ಮೂರು ಜನರು ಸಂಗಡಿಗರಾಗಿ ಸಿಕ್ಕಿದ್ದರು. ಅವರೊಡನೆ ಇಸ್ಲಾಂ ಧರ್ಮಶಾಸ್ತ್ರ, ಖುದಾನಲ್ಲಿ ನಂಬಿಕೆ ಮತ್ತು ಕಮ್ಯೂನಿಜಂ ಬಗ್ಗೆ ಚರ್ಚೆ ನಡೆಯಿತು. ಇವರ ಮಾತುಕತೆ ನಡೆದದ್ದು ಪ್ರಗತಿಶೀಲ ರಾಜನೀತಿ ಬೇರೂರದಂತೆ ಅಡ್ಡಿಪಡಿಸುವ ಒಂದು ವರ್ಗದೊಡನೆ. ತಮ್ಮ ದೇಶದ

ಜೀವನ ಕ್ರಮ ಹಾಗೂ ಆಡಳಿತದ ಬಗ್ಗೆ ಬೇಸರಗೊಂಡಿರುವ ಇಂಗ್ಲಿಷ್ ಜನರನ್ನು ಅವರು ಇಲ್ಲಿ ಕಂಡರು. ಈ ಜನರಲ್ಲಿ ವಿರೋಧ ಎಬ್ಬಿಸುವ ಸಾಮರ್ಥ್ಯವಿಲ್ಲ. ಹೀಗಾಗಿ ಮದ್ಯಪಾನ ವ್ಯಸನಿಗಳಾಗಿ ತಮ್ಮ ಬೇಸರವನ್ನು ಮರೆಯಲು ಪ್ರಯತ್ನಿಸುತ್ತಿದ್ದರು. ‘ಸಾ[illegible] ಕಂಡಾ’ದಲ್ಲಿ ಪಾಟಿಯಾಲಾದ ಮಹಾರಾಜರ ಸಾಮಂತೀ ಸಂಸ್ಕೃತಿಗೆ, ಪಂಜಾಬಿನಲ್ಲಿ ಗವರ್ನರ್ ಅವರ ಬಂಡವಾಳಶಾಹಿ ಸಂಸ್ಕೃತಿಗೆ ಪುರಾವೆಗಳು ಇವರಿಗೆ ಕಂಡು ಬಂದವು. ಮಹಾರಾಜರು ಹಾಗೂ ಗವರ್ನರ್ ಅವರ ಸಾಮಾನು ಸರಂಜಾಮುಗಳನ್ನು ಹೊರಲು ಅಲ್ಲಿದ್ದ ಕುದುರೆಗಳು, ಹೇಸರಗತ್ತೆಗಳು ಮತ್ತು ಕೂಲಿಯಾಳುಗಳನ್ನೆಲ್ಲಾ ಬಳಸಿಕೊಳ್ಳಲಾಗಿತ್ತು. ಆದರೆ ಜನಸಾಮಾನ್ಯ ಪ್ರವಾಸಿಗಳಿಗೆ ಅವಶ್ಯಕವೆನಿಸುವ ವಸ್ತುಗಳಿಗೂ ಬಹಳಷ್ಟು ದಿನಗಳ ಕಾಲ ಕಾಯಬೇಕಾದ ಸ್ಥಿತಿ ಏರ್ಪಟ್ಟಿತ್ತು. ಗುರುದ್ವಾರಗಳು ಧಾರ್ಮಿಕ ಕೇಂದ್ರಗಳು ಮತ್ತು ರಾಮರಾಜ್ಯದ ಕೇಂದ್ರಗಳನ್ನು ಇವರು ಸಂದರ್ಶಿಸಿದರು. ಜನರು ನೈನಿತಾಲನ್ನು ಭಾರತದ ಸ್ವರ್ಗವೆನ್ನುತ್ತಾರೆ. ಲೇಖಕರು ತಮ್ಮ ಅನುಭವವನ್ನು ಹೀಗೆ ಬರೆಯುತ್ತಾರೆ "ನೈನಿತಾಲಿನ ಬಂಗಲೆಗಳಲ್ಲಿ, ಪೇಟೆಗಳಲ್ಲಿ, ರಸ್ತೆಗಳಲ್ಲಿ ಇಲ್ಲಿಗೆ ಬಂದಿರುವ ‘ಬೀಗರು’ ಹಾಗೂ ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ತೊಡಗಿರುವ ಜನಗಳು, ಸಮಾಜದಲ್ಲಿ ಎರಡು ಬಣಗಳಾಗಿ ನಿರ್ದಿಷ್ಟವಾಗಿ ಹಂಚಿ ಹೋಗಿರುವುದನ್ನು ಸ್ಪಷ್ಟವಾಗಿ ಕಾಣುತ್ತೇವೆ. ಸಮಾಜದ ಒಂದು ವರ್ಗ ಸೌಕರ್ಯಗಳೆಲ್ಲವನ್ನೂ ಖರೀದಿಸುವ ಶಕ್ತಿಯಾಗಿ ಹಣ ಜೇಬುಗಳಲ್ಲಿ ಝಣಗುಟ್ಟುತ್ತಾ ಪ್ರಪಂಚದ ಎಲ್ಲ ಸುಖ ಸಂತೋಷಗಳನ್ನೂ , ಸೌಲಭ್ಯಗಳನ್ನೂ ನೀಡಬಲ್ಲ ಸ್ಥಿತಿಯಲ್ಲಿದೆ. ಸಮಾಜದ ಇನ್ನೊಂದು ಭಾಗ ಹಣವಿಲ್ಲದೆ ಕಾತರ ಹಾಗೂ ಶೋಕಪೂರ್ಣ ಕಂಗಳಿಂದ ಹಣವನ್ನು ವಶಪಡಿಸಿಕೊಂಡಿರುವ ಜನಗಳತ್ತ ನೋಡುತ್ತಿದೆ" (ದೇಖಾ-ಸೋಚಾ-ಸಮಝಾ, ಪುಟ-೧೧೩).

ಯಶಪಾಲರು ನೈನಿತಾಲಿನ ನೈಸರ್ಗಿಕ ರಮಣೀಯತೆಯನ್ನೂ ಮತ್ತು ಋತುಗಳನ್ನು ಮನಮುಟ್ಟುವ ಹಾಗೆ ಬಣ್ಣಿಸಿದ್ದಾರೆ. ಬೇಸರ ಕಳೆದುಕೊಳ್ಳಲು ಬಂದಿದ್ದ ಕೆನಡಾದ ಒಬ್ಬ ಸಾಹೇಬ ಅಲ್ಮೋಡಾ ಪ್ರವಾಸದಲ್ಲಿ ಇವರಿಗೆ ಭೇಟಿಯಾಗಿ ವ್ಯಕ್ತಿಗತ ಸ್ವಾತಂತ್ರ್ಯದ ಬಗ್ಗೆ ವಾದಕ್ಕಿಳಿದ. ಪ್ರಪಂಚವನ್ನು ಕಮ್ಯೂನಿಸಂನಿಂದ ರಕ್ಷಿಸಿಕೊಳ್ಳಬೇಕು ಎನ್ನುತ್ತಿದ್ದ. ಯಶಪಾಲರು ವ್ಯಕ್ತಿ ಸ್ವಾತಂತ್ರ್ಯದ ಮೂಲಗಳನ್ನು ಟೀಕಿಸುತ್ತಾ -"ಈ ವ್ಯಕ್ತಿಯ ಪಾಲಿಗೆ ವ್ಯಕ್ತಿ ಸ್ವಾತಂತ್ರ್ಯವೆಂದರೆ ಇವನ ಆಳು ಅರ್ಜೆಂಟೈನಾದಲ್ಲಿ ಇವನ ವ್ಯವಹಾರ ವ್ಯಾಪಾರಗಳನ್ನು ನೋಡಿಕೊಳ್ಳುತ್ತಿರಬೇಕು. ಹಾಗೂ ಇವನು ಮಾತ್ರ ತಿಂಗಳಿಗೆ ೫೦೦೦ ರೂ. ಖರ್ಚು ಮಾಡುತ್ತಾ ನೈನಿತಾಲಿನಲ್ಲಿ ಚೈನಿ ಹೊಡೆಯುತ್ತಿರಬೇಕು" ಎಂದರು(ಬೀಬೀಜೀ ಕಹತೀ ಹೈ, ಮೇರಾ ಚೆಹರಾ ರೋಬೀಲಾ ಹೈ, ಪುಟ-೪೩).

ಈ ಎಲ್ಲ ಪ್ರವಾಸ ಕಥನಗಳ ಜೊತೆಗೆ ಯಶಪಾಲರು ತಮ್ಮ ಸಣ್ಣ-ಪುಟ್ಟ ಪ್ರಸಂಗಗಳಲ್ಲಿ ಹೆಸರಾಂತ ಲೇಖಕರ ಚಾರಿತ್ರ್ಯವನ್ನು ಕುರಿತಾಡಿದ್ದಾರೆ. ಮಿಶ್ರ ಬಂಧು (ಸೋದರರು)ಗಳು ತಮ್ಮ ಕಾಲದ ಬಹು ಖ್ಯಾತ ಲೇಖಕರು. ಯಶಪಾಲರ ಕಥೆಗಳನ್ನು ಆಲಿಸಿ ಅವರ ಬಗ್ಗೆ ಅಭಿಪ್ರಾಯ ನೀಡುತ್ತೇವೆಂದು ಯಶಪಾಲರನ್ನು ಕರೆಸಿಕೊಂಡರು. ಯಶಪಾಲರ ಕಥಾ ವಾಚನ ನಡೆದಿದ್ದಾಗ ಮಿಶ್ರಬಂಧುರು ಸರದಿಯ ಪ್ರಕಾರವೆನ್ನುವ ಹಾಗೆ ಒಬ್ಬರಾದ ಮೇಲೆ ಇನ್ನೊಬ್ಬರು ಜೊಂಪು ತೆಗೆದರು. ಕಥೆ ಮುಗಿದ ನಂತರ ಕಣ್ಣುಬಿಟ್ಟು ಸಮೀಕ್ಷಕರಂತೆ ತಮ್ಮ ನಿರ್ಣಯವನ್ನು ತಿಳಿಸಿದರು - "ನಿಮ್ಮ ಕಥೆ ಬಹಳ ಚೆನ್ನಾಗಿದೆ. ನಮಗೆ ಬಹಳ ಹಿಡಿಸಿತು. ನಿಮ್ಮ ಶೈಲಿ ಹೊಸ ತೆರನದು. ಅದು ಪ್ರೇಮಚಂದರ ಶೈಲಿಯನ್ನು ಹೋಲುತ್ತದೆ. ಆದರೆ ಅವೆರಡರಲ್ಲೂ ಭೇದವಿದೆ. ನೀವು ಇನ್ನು ಓದಿಕೊಳ್ಳಬೇಕು. ನೀವು ಯಾವ ಯಾವ ಪಾಶ್ಚಾತ್ಯ ಲೇಖಕರನ್ನು ಓದಿ ಕೊಂಡಿದ್ದೀರಿ ?" ಯಶಪಾಲರು ಪಶ್ಚಿಮದ ಹಲವಾರು ಲೇಖಕರ ಹೆಸರು ಹೇಳಿದಾಗ ಮಿಶ್ರಬಂಧುಗಳಿಗೆ ಆಶ್ಚರ್ಯವಾಯಿತು. ಹಿಂದಿಯಲ್ಲಿ ಇವರೆಲ್ಲರ ಅನುವಾದಗಳಿವೆಯೇ ? ಎಂದು ಕೇಳಿದರು.

ಯಶಪಾಲರ ಪ್ರವಾಸ ಸಾಹಿತ್ಯದ ಒಳವೃತ್ತಗಳನ್ನು ಗುರ್ತಿಸಿಕೊಂಡಾಗ ಅವರದು ಮಾರ್ಕ್ಸ್‌ವಾದಿ ದೃಷ್ಟಿಕೋಣವೆಂಬುದು ಸ್ಪಷ್ಟವಾಗುತ್ತದೆ. ಯಾವ್ಯಾವ ದೇಶದ ಅಥವಾ ಸಮಾಜದ ದ್ವಂದ್ವಾತ್ಮಕ ಸಂಬಂಧಗಳನ್ನು ಗುರ್ತಿಸಿ ಅವರು ಅಲ್ಲಿನ ಸ್ಥಿತಿಗಳಿಗೆ ಬೆಲೆ ಕಟ್ಟಿದ್ದಾರೆ. ಮಾನವನಲ್ಲಿನ ಒಳದ್ರವ್ಯ ಮತ್ತು ಸಾರಸ್ವತ ಪ್ರಪಂಚದ ಎಲ್ಲೆಡೆಯಲ್ಲೂ ಒಂದೇ ಎಂಬುದನ್ನು ಅವರು ಕಂಡು ಕೊಂಡಿದ್ದಾರೆ. ದೇಶ, ಕುಲ, ಜಾತಿ, ರೂಪ, ಬಣ್ಣ ಈ ಎಲ್ಲ ತೆರೆಗಳನ್ನು ದೂರ ಸರಿಸಿದರೆ ಅವರೆಲ್ಲರೂ ಒಂದೇ ಎಂಬುದು ಅರಿವಾಗುತ್ತದೆ. ಪ್ರವಾಸದ ಮೂಲಕ ಈ ಐಕ್ಯಭಾವವನ್ನು ಕಂಡುಕೊಳ್ಳದೆ ಹೋದಾಗ ನಮ್ಮೆಲ್ಲ ಶ್ರಮ ವ್ಯರ್ಥವಾಗುತ್ತದೆ. ಶ್ರಮವನ್ನು ಹೆಚ್ಚು ಉಪಯೋಗಕಾರಿ ಆಗುವ ರೀತಿ ಬಳಸಿಕೊಂಡ ಸಾರ್ಥಕಪಡಿಸಿಕೊಳ್ಳಬೇಕೆಂಬ ಮಾರ್ಕ್ಸ್‌ವಾದಿ ಸಿದ್ಧಾಂತ ಯಶಪಾಲರದು. ಅವರು ಬರೆಯುತ್ತಾರೆ. "ಮೂಲದಲ್ಲಿ ಒಂದೇ ಜಾತಿ ಹಾಗೂ ಸ್ವಭಾವಕ್ಕೆ ಸೇರಿದ ಮನುಷ್ಯ ಪ್ರಾಣಿ ಪರಿಸ್ಥಿತಿಗಳ ಭಿನ್ನತೆಯು ಕಾರಣ, ಬೇರೆ ಬೇರೆ ಭಾಷೆಗಳನ್ನಾಡಿದರೂ, ಬೇರೆ ಬೇರೆಯಾಗಿ ನಡೆದುಕೊಂಡರೂ ಅವರೆಲ್ಲ ಒಂದೇ. ಭಿನ್ನತೆ ಮತ್ತು ಸಾದೃಶ್ಯಗಳ ಈ ದ್ವಂದ್ವ ಮನೋರಂಜಕವೆನಿಸಿದರೂ ವಿಚಾರೋತ್ಪಾದಕವೂ ಹೌದು" (ರಾಹ್ ಬೀತೀ-ಎರಡು ಮಾತು, ಪುಟ-೭).

ಯಶಪಾಲರ ಪ್ರವಾಸ ಕಥನಗಳೇ ಒಂದು ಹೋರಾಟ. ಜಗತ್ತಿನಲ್ಲಿ ಹರಡಿಕೊಂಡಿರುವ ಅವಾಸ್ತವಿಕತೆ, ಶೂನ್ಯತೆ ಬಳಸು ಮಾತಿನ ಆಧ್ಯಾತ್ಮಿಕತೆ ಇವುಗಳೆಲ್ಲದರ ವಿರುದ್ಧ ಅನುಭವ ಜನ್ಯವಾದ ಗಟ್ಟಿ ಸಾಮಗ್ರಿಯನ್ನು ಸಜ್ಜು

ಮಾಡಿಕೊಂಡು ಅವರು ಮುಂದಡಿ ಇಡುತ್ತಾರೆ. ಮಾರ್ಕ್ಸ್‌ವಾದೀ ದೃಷ್ಟಿಕೋಣದ ವ್ಯಾವಹಾರಿಕತೆಯನ್ನು ಅವರು ಪ್ರಪಂಚದ ನಕಾಶೆಯಲ್ಲಿ ಪರೀಕ್ಷೆಗೀಡು ಮಾಡಿದ್ದಾರೆ. ಧರ್ಮ ಮತ್ತು ಸಾಮ್ಯವಾದ ಒಟ್ಟೊಟ್ಟಿಗೆ ಬದುಕಿ ಬಾಳಬಲ್ಲವು ಎಂಬ ಸಾಕ್ಷ್ಯಾಧಾರಗಳನ್ನು ಒದಗಿಸಿ ಪುಸ್ತಕದಲ್ಲಿನ ಕಠೋರವೆನಿಸುವ ಮಾರ್ಕ್ಸ್‌ವಾದವನ್ನೇ ನಂಬಿದ ಭಾರತೀಯ ಮಾರ್ಕ್ಸ್‌ವಾದಿಗಳಿಗಷ್ಟೇ ಅಲ್ಲದೆ, ಧರ್ಮದ ಮಾನವೀಯ ಪಕ್ಷಗಳನ್ನು ನಂಬುವ ಧರ್ಮವಾದಿಗಳಿಗೂ ಹಿತ ನುಡಿಗಳನ್ನು ಒದಗಿಸಿದ್ದಾರೆ. ಒಂದೊಂದು ಪ್ರವಾಸದಿಂದಲೂ, ಬಂಡವಾಳಶಾಹಿ ವ್ಯವಸ್ಥೆ ಮತ್ತು ಸಾಮ್ಯವಾದಿ ಸಂಸ್ಕೃತಿಯ ನಡುವಿನ ಅಂತರ ನಿಚ್ಚಳಗೊಂಡಿದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಅಥವಾ ವ್ಯಕ್ತಿ ಸ್ವಾತಂತ್ರ್ಯದ ನಿಜವಾದ ಅರ್ಥ ಗೋಚರಿಸಿದೆ. ವಾಮ ಸಂಸ್ಕೃತಿಯ ಒಳಗಣ ಆತ್ಮೀಯ ಭಾವವೂ ಬೆಳಗಿದೆ. ಯಶಪಾಲರು ಯಾವುದೇ ಸೈದ್ಧಾಂತಿಕ ಹೊತ್ತಿಗೆಯನ್ನು ಹೊರತಂದು ಮಾಡಬಹುದಾದ ಕೆಲಸಕ್ಕಿಂತ ಹೆಚ್ಚು ಸಾಧನೆಯನ್ನು ಈ ಪ್ರವಾಸ ಸಾಹಿತ್ಯ ನೀಡಿ ಸಾಧಿಸಿದ್ದಾರೆ. ಸರಸ ಶೈಲಿಯಲ್ಲಿ ಈ ಪುಸ್ತಕಗಳನ್ನು ಬರೆದು ವಿವರಣೆಗಳನ್ನು ನೀಡಿರುವುದಲ್ಲದೆ ಮಾರ್ಕ್ಸ್‌ವಾದಿ ವಿರೋಧಿಗಳಿಗೂ ಉತ್ತರ ನೀಡಿದ್ದಾರೆ. ಜಗತ್ತಿನಲ್ಲಿ ಸಾಮ್ಯವಾದ ಹರಡುವುದರಿಂದ ಶೋಷಣೆ ಸಮಾಪ್ತಗೊಳ್ಳುತ್ತದೆಂಬ ಕಾರಣಕ್ಕಾಗಿ ಅಮೆರಿಕಾ ಸಾಮ್ಯವಾದದ ಹರಡುವಿಕೆಗೆ ತಡೆಯಾಗಿದೆ ಎಂಬುದನ್ನು ನಿರೂಪಿಸಿ ತೋರಿಸಿದ್ದಾರೆ. ಭಾಷೆ ಮತ್ತು ಅಭಿವ್ಯಂಜನೆಯ ಶೈಲಿಯಲ್ಲಿ ವ್ಯತ್ಯಾಸವಿದ್ದರೂ ತಾರಾಶಂಕರ್, ಜೈನೇಂದ್ರ್, ಗಾಂಧೀ ಹಾಗೂ ಅಮೆರಿಕಾ ರಾಜನೀತಿಯ ಚಿಂತನೆಯ ಪರಿಣಾಮದಲ್ಲಿ ಯಾವುದೇ ಭೇದವಿಲ್ಲ ಎಂದು ನಿರ್ಧಾರ ಮಾಡಿಕೊಂಡರೆ ಅದು ಅಸಂಗತ ಎನಿಸುವುದಿಲ್ಲ. ಯಾವುದೇ ಕೃತಿಯನ್ನು ನಿದ್ರಾಸ್ಥಿತಿಯಲ್ಲಿ ಕೇಳಿ ವಿಮರ್ಶಿಸಬಲ್ಲ ವಿಮರ್ಶಕರನ್ನು ಯಶಪಾಲರ ಪ್ರವಾಸ ಬರಹಗಳು ಬಯಲಿಗೆಳೆಯುತ್ತವೆ.

ಯಶಪಾಲರ ಪ್ರವಾಸ ಸಾಹಿತ್ಯದಿಂದ ಬಂಡವಾಳಶಾಹಿ ಸಮಾಜದಲ್ಲಿ ಹರಡಿಕೊಂಡಿರುವ ಎಷ್ಟೋ ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ. ವೈಜ್ಞಾನಿಕವಾದ ವಿಚಾರಧಾರೆ, ದ್ವಂದ್ವಾತ್ಮಕ ಐತಿಹಾಸಿಕ ದೃಷ್ಟಿ ಮತ್ತು ಮನುಷ್ಯನ ಸುಖಪೂರ್ಣ ಭವಿಷ್ಯದ ಕಲ್ಪನೆಯನ್ನು ಆಧಾರವಾಗಿ ಉಳ್ಳ ಲೇಖಕನ 'ನಿಯತ್ತಿನ' ಮೇಲೆ ಈ ಬರಹಗಳೆಲ್ಲಾ ಬೆಳಕು ಚೆಲ್ಲುತ್ತವೆ. ಅವರು ಬರೆದದ್ದಕ್ಕೆಲ್ಲಾ ಒಂದು ನಿಶ್ಚಿತ ಉದ್ದೇಶವಿದೆ. ಬರಹಗಳನ್ನು ಶಿಲ್ಪದ ದೃಷ್ಟಿಯಿಂದ ನೋಡಿದಾಗ ಒಂದಿಷ್ಟು ಚುಚ್ಚಿದಂತಾಗುತ್ತದೆ. 'ಲೋಹೇ ಕೀ ದೀವಾರ್ ಕೇ ದೋನೋಂ ಓರ್' ಎಂಬ ಇವರ ಮೊದಲ ಪ್ರವಾಸಕಥನವನ್ನುಳಿದು ಮಿಕ್ಕೆಲ್ಲ ಪುಸ್ತಕಗಳ ವಸ್ತುವಿನ ಆಯ್ಕೆಯಲ್ಲಿ ಆತ್ಮೀಯತೆ ಕಂಡು ಬರುವುದಿಲ್ಲ. ಕೆಲವೆಡೆ ವಿವರಣೆಗಳು ಜಾಳುಜಾಳಾಗುತ್ತವೆ. ಬರಹಗಾರನ ಸೃಜನಾತ್ಮಕ ಉದ್ವೇಗಗಳನ್ನು

ಬಿಂಬಿಸಬಲ್ಲಂತಹ ಆತ್ಮೀಯತೆ ಇಲ್ಲಿ ಇಲ್ಲ. ಬಿಡಬಹುದೆನಿಸುವ ಅನೇಕ ಅನಾವಶ್ಯಕ ಸಾಮಗ್ರಿ ಇಲ್ಲಿ ಸೇರಿಕೊಂಡಿವೆ. ಯುರೋಪಿನ ಪ್ರವಾಸದ ವಿವರಗಳು ಸಾರ್ಥಕ ಹಾಗೂ ಉದ್ದೇಶಪೂರ್ಣವಾಗಿ ಪರಿಣಮಿಸಿರುವಂತೆ ದೇಶದ ಒಳಗಿನ ಪ್ರವಾಸಗಳಲ್ಲಿ ಪ್ರಭಾವ ಬೀರುವುದಿಲ್ಲ. ಈ ದೇಶದ ಮಲೆನಾಡನ್ನು ಬಣ್ಣಿಸುವಲ್ಲಿ ನೈಸರ್ಗಿಕ ಸೌಂದರ್ಯ ಪ್ರಮುಖವಾಗಿ ಜನಜೀವನದ ವಿವರಗಳು ಗೌಣವಾಗಿವೆ. ಕೆಲವೆಡೆ ಬಂದಿರುವ ಜನಜೀವನದ ಬಣ್ಣನೆಯಲ್ಲಿ ಅನಾವಶ್ಯಕ ಅಂಶಗಳಿವೆ: ಅವೇ ಬೇರೆಯಾಗಿ ನಿಲ್ಲುತ್ತವೆ. ಆದರೂ ಯಶಪಾಲರ ಪ್ರವಾಸ ಸಾಹಿತ್ಯ ರಾಹುಲರ ನಂತರ ಹಿಂದಿ ಭಾಷೆಗೆ ಹೆಚ್ಚಿನ ಹರವು ಉಳ್ಳಂತಹ ಸಾಧನೆಯಾಗಿ ನಿಲ್ಲುತ್ತದೆ.

# ಮಾತಿಗೊಂದು ಮಾತು

ಯಶಪಾಲರು ಪ್ರಸಿದ್ಧಿಗೆ ಬಂದಿರುವುದು ಅವರು ಕತೆಗಾರರು ಎಂಬ ಕಾರಣದಿಂದ. ಅವರ ಶ್ರೇಷ್ಠ ಕೃತಿಗಳು ಸಾಹಿತ್ಯದ ಈ ಪ್ರಕಾರದಲ್ಲೇ ಇರುವುದರಿಂದ ಈ ಖ್ಯಾತಿಗೆ ಅವರು ಪಾತ್ರರು. ಆದರೆ ಅವರಿಗೆ ಅದೇ ಸರ್ವಸ್ವವಲ್ಲ. ಅವರು ತಮ್ಮ ವೇಳೆಯನ್ನು ಎಂದೂ ವ್ಯರ್ಥವಾಗಿ ಕಳೆಯುತ್ತಿರಲಿಲ್ಲ. ಕಥೆ ಅಥವಾ ಕಾದಂಬರಿ ಬರೆಯಲಾಗದಿದ್ದಾಗ ಬೇರೆ ಯಾವುದಾದರೂ ಕೆಲಸ ಮಾಡುತ್ತಿದ್ದರು. ರಾಜಕೀಯ ಪ್ರಬಂಧಗಳನ್ನು ಬರೆಯುತ್ತಿದ್ದರು. ವಿಶ್ವ ಸಾಹಿತ್ಯದ ಮಹತ್ವಪೂರ್ಣ ಕೃತಿಗಳನ್ನು ಅನುವಾದಿಸುತ್ತಿದ್ದರು. ಹಾಗೂ ಡೈರಿ ಬರೆಯುತ್ತಿದ್ದರು. ನಾಟಕ ಕ್ಷೇತ್ರದಲ್ಲೂ ಒಂದೆರಡು ಬಾರಿ ಕೈಯಾಡಿಸಿದರು. ಗೆಳೆಯರಿಗೆ ಬಲು ಆಸಕ್ತಿಯಿಂದ, ಮನಃಪೂರ್ವಕವಾಗಿ ಪತ್ರ ಬರೆಯುತ್ತಿದ್ದರು. ಹೇಳಬೇಕೆನಿಸಿದುದೆನ್ನೆಲ್ಲಾ ಹೇಳುತ್ತಿದ್ದರು. ಬೇರೆಯವರನ್ನು ಪೂರ್ತಿಯಾಗಿ ಕೇಳುತ್ತಿದ್ದರು. ಅವರ ಪತ್ರಗಳಲ್ಲಿ ಆ ಕಾಲದ ಚಲನವಲನವನ್ನು ನಾವು ಕಾಣುತ್ತೇವೆ. ಅವು ಸಾಹಿತ್ಯದ ಖಜಾನೆಗಳು, ಅವರು ಪತ್ರಮುಖೇನ ಜನರೊಂದಿಗೆ ಪರಾಮರ್ಶೆ ವ್ಯಕ್ತಪಡಿಸುತ್ತಿದ್ದರು. ಅಂತೆಯೇ ತಮ್ಮ ಮೇಲಿನ ಆರೋಪಗಳಿಗೆ ಉತ್ತರ ನೀಡುತ್ತಿದ್ದರು. ಈ ಲೇಖನದಲ್ಲಿ ಅಚ್ಚರಿ ಪಡಬಹುದಾದಂತಹ ಗಂಭೀರ ಆತ್ಮವಿಶ್ವಾಸವಿತ್ತು. ಜನಸಾಮಾನ್ಯರೆನಿಸುವವರು ಹೇಳಿದ್ದು ಸರಿ ಎನಿಸಿದರೆ ತಮ್ಮನ್ನು ತಿದ್ದಿಕೊಳ್ಳುತ್ತಿದ್ದರು. ಸರಿ ಎನಿಸದೆ ಹೋದರೆ ಬಹು ಹೆಸರಾಂತ ವಿಮರ್ಶಕರೆನಿಸಿದವರ ವಿಮರ್ಶೆಯನ್ನು ಲೆಕ್ಕಿಸುತ್ತಿರಲಿಲ್ಲ. ಅವರ ಪತ್ರಗಳ ಒಂದು ಸಂಕಲನವನ್ನು ಮಧುರೇಶರು ತಂದಿದ್ದಾರೆ. ಅದರಲ್ಲಿ ಯಶಪಾಲರು ಮಧುರೇಶರಿಗೆ ಬರೆದ ಪತ್ರಗಳಿವೆ. ಉಳಿದ ಲೇಖಕರಿಗೆ ಹಾಗೂ ಗೆಳೆಯರಿಗೆ ಬರೆದ ಪತ್ರಗಳೂ ಮುಂದೆಂದಾದರೂ ಬೆಳಕು ಕಾಣಬಹುದು. ಯಶಪಾಲರು ಪ್ರತಿಯೊಂದು ಮಹತ್ವಪೂರ್ಣವಾದ ಪ್ರಸಂಗವನ್ನೋ ಅಥವಾ ಪ್ರಶ್ನೆಗಳನ್ನೋ ಪತ್ರಗಳ ಮೂಲಕ ಅಭಿವ್ಯಕ್ತ ಮಾಡಿದ್ದಾರೆ. ತಮ್ಮ ಕೃತಿಗಳಲ್ಲಿ ಎಲ್ಲ ಪ್ರಶ್ನೆಗಳನ್ನು ಸೃಜನಾತ್ಮಕವಾಗಿ ಬಳಸಿಕೊಂಡಿದ್ದಾರೆ. ಹೀಗಾಗಿ ಅವರ ಸಾಹಿತ್ಯ, ಅವರ ಜೀವನದ ವ್ಯಥೆ, ಯುಗದ ಕಥೆಯಾಗಿ, ಸೃಜನಶಕ್ತಿಯ ದಸ್ತಾವೇಜಾಗಿದೆ.

ಯಶಪಾಲರು ಅನುವಾದಗಳನ್ನು ಮಾಡಿದ್ದಾರೆ. ಲೂಯಿ ಫಿಶರ್ ಅವರ 'ಗಾಂಧೀ ಮತ್ತು ಲೆನಿನ್', ಪದೀ ಕಾರವಾರ್ಯಾಯೇವ್ ಅವರ 'ಡಿಸೈಸಿವ್ ಸ್ಟೆಪ್' ಚೀನೀ ಕಮ್ಯೂನಿಸ್ಟ್ ಪಾರ್ಟಿ, ಅಮೆರಿಕಾ ಲೇಖಕಿ ಪರ್ಲ್ ಎಸ್. ಬಕ್ ಅವರ "ಪೆವಿಲಿಯನ್ ಆಫ್ ವುಮೆನ್", ಗಾಲಿನಾ ನಿಕೋಲಾಯೇವ್ ಅವರ

'ಹಾರ್ವೆಸ್ಟ್' ಮೊದಲಾದವುಗಳು ಅವರು ಆರಿಸಿಕೊಂಡ ಕೃತಿಗಳು. ಭಾಷಾಂತರವಾದ ಈ ಕೃತಿಗಳ ಹೆಸರು 'ಗಾಂಧಿ ಔರ್ ಲೆನಿನ್', 'ಪಕ್ಕಾ ಕದಮ್, ಚೀನೀ ಕಮ್ಯೂನಿಸ್ಟ್ ಪಾರ್ಟಿ', 'ಜನಾನೀ ಡ್ಯೋಢಿ' ಹಾಗೂ 'ಫಸಲ್'. ಇವಲ್ಲದೆ 'ಚಲನೀ ಮೇ ಅಮೃತ್' (ಕಮಲಾ ಮಾರ್ಕಂಡೇಯ್ ಅವರ ಇಂಗ್ಲಿಷ್ ಕಾದಂಬರಿ) ಹಾಗೂ ಜುಲೈಖಾ (ಅಸಕದ್ ಮುಖ್ತಾರ್ ಅವರ ಕಾದಂಬರಿ) ಎಂಬ ಅನುವಾದಿತ ಕಾದಂಬರಿಗಳು ಪ್ರಕಟವಾಗಿವೆ.

ಯಶಪಾಲ್ ಅವರು 'ನಶೇ ನಶೇ ಕೀ ಬಾತ್' ಎಂಬ ಒಂದು ನಾಟಕವನ್ನೂ ಬರೆದರು. ಇದು ೧೯೫೨ರಲ್ಲಿ ಪ್ರಕಟವಾಯಿತು. ಅವರ ರಾಜನೈತಿಕ ಹಾಗೂ ಸಂಸ್ಮರಣಾತ್ಮಕ ಪ್ರಬಂಧಗಳನ್ನೊಳಗೊಂಡ ಪುಸ್ತಕಗಳು 'ಬಾತ್-ಬಾತ್ ಮೇ ಬಾತ್' (೧೯೫೦), 'ರಾಮ ರಾಜ್ಯ ಕೀ ಕಥಾ' (೧೯೫೦), 'ದೇಖಾ-ಸೋಚಾ-ಸಮಝಾ'(೧೯೫೧), ಹಾಗೂ 'ಬೀಬೀಜೀ ಕಹತೀ ಹೇ, ಮೇರಾ ಚೆಹರಾ ರೋಬೀಲಾ ಹೈ' (೧೯೫೯), 'ಕ್ರಾಂತಿಕಾರೀ ಜೀವನ್ ಕೇ ಸಂಸ್ಮರಣ್-ಸಿಂಹಾವಲೋಕನ್ ಭಾಗ-೧' (೧೯೫೧) ಭಾಗ-೨ (೧೯೫೨) ಮತ್ತು ಭಾಗ-೩ (೧೯೫೫). ವಿಪ್ಲವದ ಖಾಯಂ ಅಂಕಣಗಳಾದ 'ನ್ಯಾಯ್ ಕಾ ಸಂಘರ್ಷ', 'ಚಕ್ಕರ್ ಕ್ಲಬ್' ಹಾಗೂ 'ಜಗ್ ಕಾ ಮುಜರಾ' ಸಹ ಪ್ರಕಟಗೊಂಡಿವೆ. ಯಶಪಾಲರು ತಮ್ಮ ಕ್ರಾಂತಿಕಾರಿ ಚಟುವಟಿಕೆಗಳಿಗೂ ದಾರ್ಶನಿಕತೆಯ 'ದಿರಿಸು' ತೊಡಿಸಿದರು ಎಂಬ ಮಾತು ಉಲ್ಲೇಖಾರ್ಹ. ಅವರು ಭಗವತೀಚರಣ್ ವರ್ಮಾ ಅವರನ್ನು ಕೂಡಿಕೊಂಡು 'ಹಿಂದುಸ್ತಾನೀ ಸಮಾಜವಾದಿ ಪ್ರಜಾತಂತ್ರ ಸೇನಾ'ದ ಘೋಷಣಾ ಪತ್ರವಾಗಿ 'ಫಿಲಾಸಫೀ ಆಫ್ ದೀ ಬಾಮ್ಬ್' ಎಂಬುದನ್ನು ಬರೆದರು.

ಇತ್ತೀಚೆಗೆ ಲೋಕ್‌ಭಾರತೀ ಪ್ರಕಾಶನದವರು ಅವರ ಕೆಲವು ಅಪ್ರಕಟಿತ ಕಥೆಗಳನ್ನು 'ಲ್ಯಾಂಪ್ ಶೇಡ್' ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ಯಶಪಾಲರ ಈ ಬರಹಗಳು ಕೃತಿತ್ವದ ಪ್ರಕಾರದ ದೃಷ್ಟಿಯಿಂದ ಕಥೆ ಹಾಗೂ ನಾಟಕಗಳ ಪರಿಧಿಯೊಳಗೆ ಬರುವುದಿಲ್ಲ. ಶುದ್ಧಾಂಗ ರಾಜಕೀಯ ಬರಹವಾಗಿವೆ. ಅವರ ನೆನಪಿನ ಪದರಗಳಲ್ಲಿ ಅಥವಾ ಸಮಸ್ಯೆಯನ್ನು ಕುರಿತು ಚಿಂತನ ನಡೆಸುವಲ್ಲಿ ಮಾತ್ರ ರಾಜಕೀಯ ದೃಷ್ಟಿ ಇರುತ್ತದೆ ಎಂದಾಗುವುದಿಲ್ಲ. ಅದನ್ನು ವ್ಯಾಖ್ಯಾನಿಸುವ ಹಾಗೂ ವಿಶ್ಲೇಷಿಸುವ ಆಧಾರವೂ ರಾಜಕೀಯವಾದುದೇ. ಈ ತೆರನಾದ ಬರಹಗಳಲ್ಲಿ, ಪತ್ರಿಕೆ ನಡೆಸುವಲ್ಲಿ, ಬೇರೆಯ ಪತ್ರಿಕೆಗಳನ್ನು ಓದುವಲ್ಲಿ, ಅಥವಾ ಬೇರೆಲ್ಲ ಚರ್ಚೆಗಳಲ್ಲೂ ಭಾಗವಹಿಸುವಲ್ಲಿ ಯಶಪಾಲರು ತಮ್ಮ ವಿಚಾರಗಳನ್ನು ಮೇಲ್ಮಟ್ಟಕ್ಕೆ ಒಯ್ದಿದ್ದಾರೆ. ಪ್ರತಿಭಾ ಸಂಪನ್ನರೂ, ಪ್ರತ್ಯುತ್ಪನ್ನಮತಿಗಳೂ ಆದ ಕಾರಣ ಅವರು ಎಂದೂ ಸೋಲಲಿಲ್ಲ. ಈ ಎಲ್ಲ ವಿಚಾರಗಳೂ ಅವರ ಪುಸ್ತಕಗಳಲ್ಲಿವೆ. 'ಬಾತ್-ಬಾತ್-ಮೇ ಬಾತ್'ನಿಂದ ಆರಂಭಗೊಂಡು,

'ಸಿಂಹಾವಲೋಕನ'ವಾಗಿ ಹರಿದು 'ಜಗ್ ಕಾ ಮುಜರಾ'ವನ್ನು ಮುಟ್ಟಿದೆ. ಈ ಎಲ್ಲ ಪುಸ್ತಕಗಳಲ್ಲಿ ತರ್ಕಬದ್ಧ ಟಿಪ್ಪಣಿಗಳು ತುಂಬಿಕೊಂಡಿವೆ. 'ಸಿಂಹಾವಲೋಕನ'ದ ಬಗ್ಗೆ ಅವರು ಸ್ವತಃ ಬರೆಯುತ್ತಾರೆ. 'ಹಿಂದೂಸ್ತಾನೀ ಸಮಾಜವಾದಿ ಪ್ರಜಾತಂತ್ರ ಸೇನೆಯ ಸಂಬಂಧವಾದ ನನ್ನ ಸಂಸ್ಮರಣೆಗಳು ನನ್ನ ಹಾಗೂ ನನ್ನ ಗೆಳೆಯರ ಸ್ವಾನುಭವಗಳೇನೋ ಹೌದು. ಆದರೆ ನನ್ನ ಎಲ್ಲ ಸ್ವಾನುಭವಗಳು ಇದರಲ್ಲಿ ಬಂದಿಲ್ಲ. ಬರಲೂಬಾರದು. ಸ್ವಾತಂತ್ರ್ಯ ಪ್ರಾಪ್ತಿಯ ಪ್ರಯತ್ನಗಳ ಇತಿಹಾಸವನ್ನು ಬರೆಯುವ ಕಾಲ ಕೂಡಿ ಬಂದಾಗ ಇವೆಲ್ಲಾ ಉಪಯೋಗಕ್ಕೆ ಬರಬಹುದು (ಸಿಂಹಾವಲೋಕನ ಭಾಗ-೩, ಭೂಮಿಕಾ). 'ನ್ಯಾಯಕಾ ಸಂಘರ್ಷ' (ನ್ಯಾಯಕ್ಕಾಗಿ ಹೋರಾಟ) ಪುಸ್ತಕದಲ್ಲಿ ಒಟ್ಟು ಹತ್ತೊಂಬತ್ತು ಪ್ರಬಂಧಗಳಿವೆ. ಇದರಲ್ಲಿ ಗಾಂಧೀವಾದ ಹಾಗೂ ಅವರ ಸತ್ಯಾಗ್ರಹಗಳು, ಬಂಡವಾಳಗಾರರು ಹಾಗೂ ಕಾರ್ಮಿಕರು, ಬಡವರ ದೇವರು, ಧರ್ಮದ ಮುಲಾಮು, ರೈತ-ಕಾರ್ಮಿಕ ವರ್ಗ ಸಮಸ್ಯೆ ಮೊದಲಾದ ವಿಷಯಗಳಿವೆ. 'ಸಮಾಜ್ ಕೆ ಶತ್ರು' ಪ್ರಬಂಧಗಳಲ್ಲಿ ವರ್ಗಗತ ಶತ್ರುತ್ವವನ್ನು ಗುರ್ತಿಸುವುದರ ಜೊತೆಗೆ ನ್ಯಾಯದ ಸ್ವರೂಪ ಸ್ವತಂತ್ರವಾಗಿ ವರ್ಗಬದ್ಧ ನೈತಿಕತೆಗೆ ಹೊಂದಿಕೊಂಡಿರುವುದನ್ನು ಕಂಡಿದ್ದಾರೆ. ಯಶಪಾಲರು ತಮ್ಮ ಪ್ರಬಂಧಗಳ ಮೂಲಕ ದಾಸ್ಯವು ಸಮುದ್ರದಾಚಿನ ಪ್ರದೇಶಗಳಿಂದಷ್ಟೇ ಬರುವುದಿಲ್ಲ. ಅದು ಇಲ್ಲೂ ಇದೆ. ವಾಸ್ತವದಲ್ಲಿ ಅದು ಹುಟ್ಟಿ ಬಂದಿರುವುದು ಒಂದು ವ್ಯವಸ್ಥೆಯಿಂದ, ಎಂದು ಸ್ವಾತಂತ್ರ್ಯಕ್ಕಾಗಿ ಆಂದೋಲನ ನಡೆಯುತ್ತಿದ್ದ ಕಾಲದಲ್ಲಿ ಒಂದೇ ಸಮನಾಗಿ ಎಚ್ಚರಿಕೆ ನೀಡುತ್ತಿದ್ದರು. ಅವರು ಬರೆಯುತ್ತಾರೆ "ಈ ಪುಸ್ತಕದಲ್ಲಿ ನಮ್ಮ ಹೊಸ ಸಂದರ್ಭಗಳಿಗೆ ಏನೂ ಪ್ರಯೋಜನಕ್ಕೆ ಬಾರದ ಹಾಗೂ ಜರ್ಜರಿತವಾಗಿರುವ ನ್ಯಾಯ ಧೋರಣೆಗಳನ್ನು ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ವಿಶ್ಲೇಷಣೆಯಲ್ಲಿ ನಮ್ಮ ಈಗಿನ ನ್ಯಾಯ ಧೋರಣೆಗಳು ಹಾಗೂ ಹೆಜ್ಜೆ ಹೆಜ್ಜೆಗೆ ಕಂಡು ಬರುವ ವಿರೋಧಾಭಾಸಗಳು ಕಣ್ಣು ಮುಂದೆ ನಿಲ್ಲುತ್ತವೆ. ಒಂದು ಹೊಸದಾದ ಸಮಾಜ ವ್ಯವಸ್ಥೆ ಹಾಗೂ ಪದ್ಧತಿಯತ್ತ ನಮ್ಮ ಗಮನ ಹರಿಯುತ್ತದೆ" (ನ್ಯಾಯ್ ಕಾ ಸಂಘರ್ಷ, ಭೂಮಿಕಾ).

'ಚಕ್ಕರ್ ಕ್ಲಬ್' ಎಂಟು ಪ್ರಬಂಧಗಳನ್ನೊಳಗೊಂಡ ಪುಸ್ತಕ. ಇದರಲ್ಲಿ ಲೇಖಕರು ಹರಟೆಗೆ ಸಿಕ್ಕುವ ವಿಷಯಗಳನ್ನೆತ್ತಿಕೊಂಡಿದ್ದಾರೆ. ಹೋಟೆಲಲ್ಲಿ ಚಹ ಕುಡಿವಾಗ, ದಾರಿಯಲ್ಲಿ ನಡೆವಾಗ, ನಾಲ್ಕು ಜನ ಕೂತು ಹರಟೆ ಕೊಚ್ಚುವಾಗ -ಅಂದರೆ ದಿಕ್ಕು ದೆಸೆಯಿಲ್ಲದೆ ಎಲ್ಲ ವಿಷಯಗಳನ್ನೆತ್ತಿಕೊಂಡು ಮಾತಿಗೆ ಮಾತು ಕೂಡಿಸುತ್ತಾರೆ. ಗಾಂಧೀಜಿಯ ಪ್ರಭಾವ ವಲಯದಲ್ಲಿ ರಾಮರಾಜ್ಯ ಹಾಗೂ ಭಗವಂತನನ್ನು ಕುರಿತಾದ ವಿಷಯಗಳು ಸ್ವಾತಂತ್ರ್ಯಕ್ಕಾಗಿ ನಡೆದ ಚಳವಳಿಯಲ್ಲಿ ಸರ್ವೇಸಾಧಾರಣವಾಗಿ ಸೇರಿಕೊಂಡು ಬಿಟ್ಟಿದ್ದವು. 'ದರಿದ್ರ ನಾರಾಯಣ'ನೂ

ವಾದ ವಿವಾದಗಳಿಗೆ ಸಿಕ್ಕಿಕೊಂಡಿದ್ದ ಸ್ತ್ರೀಯರ ಸ್ವಾತಂತ್ರ್ಯದ ಮಾತು ಆಗ ತಾನೇ ಮೊದಲ ಬಾರಿಗೆ ಶುರು ಆಗಿತ್ತು. ಆದುದರಿಂದ ಈ ಎಲ್ಲ ವಿಷಯಗಳು 'ಚಕ್ಕರ್ ಕ್ಲಬ್'ಗೆ ವಸ್ತುಗಳಾದವು. 'ಚಕ್ಕರ್ ಕ್ಲಬ್' ಕ್ರಮಬದ್ಧವಲ್ಲದ ಆದರೆ ಮನದಾಳದಿಂದ ಹೊರಹೊಮ್ಮುವ ಮಾತುಗಳತ್ತ ಗಮನಹರಿಸುತ್ತಾ, ಎಲ್ಲ ತೆರನಾದ ಗುಟ್ಟುಗಳನ್ನು ರಟ್ಟು ಮಾಡುತ್ತಿತ್ತು. 'ವಿಪ್ಲವ'ದಲ್ಲಿ ಇದರದೇ ಅಂಕಣವಿರುತ್ತಿತ್ತು. 'ವಿಪ್ಲವೀ ಟ್ರಾಕ್ಟ್'ನಲ್ಲಿ 'ಬೇಕಾರ್ ಎಂಡ್ ಕಂಪನಿ ಲಿಮಿಟೆಡ್' ಎಂಬ ಹೆಸರಿನಿಂದ ಈ "ಕ್ಲಬ್" ಸಮಾಜದ ಅಂತರ್ಯವನ್ನು ಪರೀಕ್ಷೆಗೊಳಪಡಿಸುತ್ತಿತ್ತು. ಇಂದೂ ಆ ಪುಸ್ತಕವನ್ನು ಓದಿದರೆ ಈ ರೀತಿಯ ಶೋಧನೆ ತಾಜಾ ಎನಿಸುತ್ತದೆ. ಪೀಠಿಕೆಯಲ್ಲಿ 'ಬೇಕಾರ್ ಅಂಡ್ ಕಂಪೆನಿ'ಯ ಸದಸ್ಯತಾ ನಿಯಮಗಳನ್ನು ಉಲ್ಲೇಖಿಸಲಾಗಿದೆ. ಅವು ಬಹು ಪರಿಪಕ್ವವೂ ರೋಚಕವೂ ಆಗಿವೆ. ಉದಾಹರಣೆಗೆ ಆ ನಿಯಮಗಳಲ್ಲಿ ಒಂದು ಹೀಗಿದೆ. "ಜರೂರು ಎನಿಸುವಷ್ಟು ಭೂಮಿಯನ್ನು ಹೊಂದಿರದ ಕಾರಣ ಕಂಗಾಲಾಗಿರುವ ರೈತರು, ತಮ್ಮ ಹಿರಿಯರ ಕಾಲದ ಆಸ್ತಿ ಭೂಮಿ, ಹೆಚ್ಚು ಮಕ್ಕಳಾದ ಕಾರಣ ಅನೇಕರಲ್ಲಿ ಹಂಚಿ ಹೋಗಿ ಹಸಿವಿನಿಂದ ಸಾಯುವೆವು ಎಂಬ ಭೀತಿಯಿಂದ ಕಂಗೆಟ್ಟಿರುವವರು. ನಿರುದ್ಯೋಗಿಗಳ 'ಎಂಡ್ ಕಂಪನಿ'ಯಲ್ಲಿ ಅಥವಾ ಸಹಾಯಕರಲ್ಲಿ ದಾಖಲಾತಿ ಪಡೆಯಬಹುದು (ಚಕ್ಕರ್ ಕ್ಲಬ್, ಪುಟ-೭).

'ಬೇಕಾರ್ ಎಂಡ್ ಕಂಪನಿ' ಅಥವಾ 'ಚಕ್ಕರ್ ಕ್ಲಬ್'ನ ಸದಸ್ಯರು ಜನಗಳಲ್ಲಿ ಜಾಗೃತಿಯನ್ನು ಬೆಳೆಸುವ ಕೆಲಸವನ್ನು ಕೈಗೊಂಡಿದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದು ಜನ ಶಿಕ್ಷಣದ ನಿಟ್ಟಿನಲ್ಲಿ ಪ್ರಾರಂಭಗೊಂಡ ಪ್ರಯತ್ನ. ಯಶಪಾಲರು ಈ ಸರಣಿಯಲ್ಲಿ ಜನ ಸಾಹಿತ್ಯದ ಪ್ರಶ್ನೆಯನ್ನು ಎತ್ತಿದರು. ಅವರು ಸಾಹಿತ್ಯವನ್ನು ಸಮಾಜಕ್ಕೆ ಅನುಗುಣವಾಗಿ ಬದಲಾಗುವ ವಸ್ತು ಎಂದರು. ನಾರಿಯರ ಮಿಲನ ವಿರಹಗಳ ಕಥೆಗಳನ್ನು ಆಧರಿಸಿ ಬರೆದ ಪರಂಪರಾಗತ ಸಾಹಿತ್ಯವನ್ನೇ ಈಗಲೂ ಸೃಜಿಸುತ್ತೀರಾ? ಎಂದು ಬರಹಗಾರರಿಗೆ ಸವಾಲು ಹಾಕಿದರು. ಇಂದು ಆ ಅನುಭೂತಿಗೆ ಭೌತಿಕ ಆಧಾರವೆಲ್ಲಿದೆ ಎಂದರು.

"ಇಂದು ಪ್ರಶಸ್ತವಾದ ವಿಶಾಲ ಸೌಧಗಳ ಗವಾಕ್ಷಗಳಿಂದ ಹನಿ ಹನಿಯಾಗಿ ಜಿನುಗಿ ಬರುವ ಮಳೆಗಾಳಿಯಲ್ಲಿ, ಕೃಶಕಟಿಯಾದವಳೊಬ್ಬಳು ಬಿಗಿವ ಕುಪ್ಪಸದಲ್ಲಿ ಯೌವನವನ್ನು ಅವುಂಕಿ ಮದರಂಗಿ ಹಚ್ಚಿದ ಎರಡೇ ಬೆರಳುಗಳಿಂದ ಅವಗುಂಠನವನ್ನು ಸರಿಸಿ, ಆಕರ್ಣಾಂತ ಅರಳಿದ ಕಂಗಳಲ್ಲಿ ಮಂದಹಾಸವನ್ನೇ ಕುಸುಮಶರವಾಗಿಸುವ ನಾಯಕಿಯರೆಲ್ಲಿದ್ದಾರೆ? (ಅದೇ, ಪುಟ-೯). ಈಗ ಹೆಣ್ಣಾಗಲಿ, ಪುರುಷ ಸಮಾಜವಾಗಲಿ ತಮ್ಮ ಅಧಿಕಾರಗಳಿಗಾಗಿ ಸೆಣಸಬೇಕಾದ ಯುಗದಲ್ಲಿದ್ದಾರೆ." ಯಶಪಾಲ್ ಅವರು ಈ ಹೋರಾಟಕ್ಕಾಗಿಯೇ 'ಪಾತ್ರ'ಗಳನ್ನ ಸೃಷ್ಟಿಸಿದ್ದರು. ಈ ಯುಗದಲ್ಲಿ ಸರ್ವರ ಸ್ವಾತಂತ್ರ್ಯಕ್ಕಾಗಿ ಕೂಗು

ಗಟ್ಟಿಯಾದಾಗ ಬಂಡವಾಳಶಾಹಿ ವ್ಯವಸ್ಥೆ ವ್ಯಕ್ತಿ ಸ್ವಾತಂತ್ರ್ಯದ ಬೊಬ್ಬೆ ಹಾಕಿತು. ಸಮಾಜವಾದೀ ವ್ಯವಸ್ಥೆ ವ್ಯಕ್ತಿ ಸ್ವಾತಂತ್ರ್ಯವನ್ನು ಕಸಿಯುತ್ತದೆ ಎಂದಿತು. ಯಶಪಾಲರು ಈ ಸಮಸ್ಯೆಯನ್ನು ಬಿಡಿಸುತ್ತಾ ತಮ್ಮ ಲೇಖನಗಳಲ್ಲಿ ಬಂಡವಾಳಶಾಹಿ ಮತ್ತು ಸಮಾಜವಾದದ ನಡುವಿನ ಅಂತರವನ್ನು ಎಲ್ಲರಿಗೂ ತಿಳಿಯ ಹೇಳಲು ಚರ್ಚೆಗಳನ್ನು ಪ್ರಾರಂಭಿಸಿದರು. "ಬೀಬೀಜೀ ಕಹತೀ ಹೈ, ಮೇರಾ ಚೆಹರಾ ರೋಬೀಲಾ ಹೈ' ಎಂಬ ಪುಸ್ತಕದ ದೀರ್ಘ ಪ್ರಬಂಧಗಳಲ್ಲಿ ಅವರು ಒಂದೆಡೆ ಬರೆದರು. "ಬಂಡವಾಳಶಾಹಿ ಪ್ರಜಾತಂತ್ರದ ಕಾನೂನಿನ ದೃಷ್ಟಿಯಲ್ಲಿ ಮಾನವ ಮಾನವರಲ್ಲಿ ಸಮಾನತೆಯ ಆದರ್ಶವೆಂದರೆ, ಬಾಗೇಶ್ವರದಲ್ಲಿರುವ ರೋಗಗ್ರಸ್ತ ವೃದ್ಧ ಮಾತೆಯನ್ನು ಕಾಣಲು ತವಕಿಸುವ ಜಮನಾದತ್ತನ (ಹಣವಿಲ್ಲದ ಸ್ಥಿತಿಯ ಕಾರಣ) ಅಸಮಾರ್ಥತೆ, ಇಪ್ಪತ್ತು ರೂಪಾಯಿ ಸಂಬಳ ನೀಡಬಲ್ಲ ಸರ್ಕಾರಿ ನೌಕರಿ ಹಿಡಿಯಲು ಲಖನೌಗೋ, ದಿಲ್ಲಿಗೋ ಹೋಗಲಾಗದ ಸ್ಥಿತಿಯಲ್ಲಿರುವ ಲಕ್ಷ್ಮಣ, ಐವತ್ತೈದು ರೂ. ಸಂಬಳ ಬರುತ್ತಿದ್ದು ಒಳ್ಳೆಯ ಮನೆಯನ್ನು ಬಾಡಿಗೆಗೆ ಹಿಡಿಯಲು ಸಾಧ್ಯವಾಗದಿರುವಂತಹ ನನ್ನ ಗೆಳೆಯ, ತನ್ನ ಉದ್ದಿಮೆಗಳಿಂದ ಗಳಿಸಿದ ಲಾಭಾಂಶದ ಅತ್ಯಲ್ಪ ಭಾಗವನ್ನು ಧರ್ಮಕಾರ್ಯಗಳಿಗೆಂದು ತೆಗೆದು ಅದರಿಂದ ಐದು ಕಾಲೇಜು, ಇಪ್ಪತ್ತೈದು ಧರ್ಮಶಾಲೆಗಳನ್ನು ಸ್ಥಾಪಿಸಿ ನಡೆಸಿಕೊಂಡು ಬರುತ್ತಿರುವ ಉದ್ಯಮಿ, ಪ್ರತಿಯೊಂದು ಪ್ರದೇಶದ ವಿಧಾನಸಭಾ ಚುನಾವಣೆಗಳಲ್ಲಿ ತನ್ನವರೇ ಆದ ಪ್ರತಿನಿಧಿಗಳು ಆರಿಸಿ ಬರುವಂತೆ ಮಾಡಬಲ್ಲ ಹಿರಿಯ ಉದ್ದಿಮೆದಾರ ರಾಜಾ ಇವರೆಲ್ಲಾ ಒಂದೇ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕಾನೂನಿನ ಪ್ರಕಾರ ಇವರೆಲ್ಲರಿಗೂ ಸಮಾನ ವ್ಯಕ್ತಿ ಸ್ವಾತಂತ್ರ್ಯವಿದೆ" (ಪುಟ-೫೩).

ಯಶಪಾಲ್ ಅವರ ವಾದವಿವಾದಗಳು, ಸಿದ್ಧಾಂತವನ್ನು ನಿರೂಪಿಸುವ ರೀತಿ, ಉದಾಹರಣೆಗಳು, ತರ್ಕಜಾಲಗಳು ಇವೆಲ್ಲ ಅನುಭವದಿಂದ ಹುಟ್ಟಿಬಂದಂತವುಗಳು. 'ಕಣ್ಣಾರೆ ಕಂಡದ್ದು' ಎಂಬುದರ ಇಷ್ಟು ವ್ಯಾಪಕವಾದ ವಿವರಣೆ ನಮಗೆ ಈಗಿನ ವರ್ತಮಾನದಲ್ಲಿ ಸಿಗುವುದು ಪ್ರೇಮಚಂದರಲ್ಲಿ ಅಥವಾ ಯಶಪಾಲರಲ್ಲಿ ಮಾತ್ರ. ಯಶಪಾಲರು ತಮ್ಮ ಒಂದು ಪುಸ್ತಕಕ್ಕೆ 'ದೇಖಾ-ಸೋಚಾ-ಸಮಝಾ', (ನೋಡಿದೆ-ವಿಚಾರಮಾಡಿದೆ-ತಿಳಿದೆ) ಎಂದೇ ನಾಮಕರಣ ಮಾಡಿದ್ದಾರೆ. ಈ ಪುಸ್ತಕದಲ್ಲಿ ಸೇವಾಗ್ರಾಮ-ಸಿಮ್ಲಾ-ನೈನಿತಾಲ್‌ಗಳಿಗೆ ಮಾಡಿದ ಪ್ರವಾಸದ ವಿವರಣೆಗಳ ಜೊತೆಗೆ 'ಸಾಹಿತ್ಯ ಕಾ ಮೂಲ್ಯಾಂಕನ್', 'ನಾದಿರ್ ಶಾಹೀ', 'ವ್ಯಕ್ತಿಗತ ಸ್ವತಂತ್ರತಾ', 'ವಿಚಾರೋಂ ಕೀ ಸ್ವತಂತ್ರ ಸತ್ತಾ' ಹಾಗೂ 'ಅಪನೇ ಸಂಪರ್ಕೋಂ ಕೆ ಪ್ರತಿ ಮೇರೆ ದೇಯ್' ಎಂಬ ವಿಷಯಗಳನ್ನು ಕುರಿತಾದ ಪ್ರಬಂಧಗಳಿವೆ.

ಎಲ್ಲ ಪ್ರಬಂಧಗಳಲ್ಲೂ ವ್ಯವಹಾರ ಪ್ರಧಾನ ಸಮಾಜದ ವಿಮರ್ಶೆಯಿದೆ. ಈ ವಿಮರ್ಶೆಗಳ ಹಿನ್ನೆಲೆಯಲ್ಲಿ ಮಾರ್ಕ್ಸ್‌ವಾದಿ ದೃಷ್ಟಿ ಇದೆ. ಇವೆಲ್ಲದರ ಆಧಾರದ ಮೇಲೆಯೂ, ಅವರು ಗಾಂಧೀಜೀಯ ರಾಮರಾಜ್ಯದ ಭವಿಷ್ಯದ ಪರಿಕಲ್ಪನೆಯನ್ನು ಹಾಗೂ ಅದರ ಅಸಂಭಾವ್ಯ ಹಾಗೂ ಅವೈಜ್ಞಾನಿಕ ಆದರ್ಶಗಳ ಪೊಳ್ಳುತನವನ್ನು ಎತ್ತಿ ತೋರಿಸಿದ್ದಾರೆ. ಜೈನೇಂದ್ರ ಅವರೊಡನೆ ಏರ್ಪಟ್ಟ ವಿವಾದದ ಸಂದರ್ಭದಲ್ಲಿ ಅವರು ಬರೆದರು, "ನಾನು ಗಾಂಧೀವಾದದ ಸೈದ್ಧಾಂತಿಕ ಹಾಗೂ ವ್ಯಾವಹಾರಿಕ ಎರಡೂ ರೂಪಗಳನ್ನು ನನ್ನ ಧರ್ಮಚಕ್ಷುವಿನಿಂದ ಅದರ ಸಂಪೂರ್ಣ ಇತಿಹಾಸದೊಳಗಿನಿಂದ ನೋಡಿದ್ದೇನೆ. ಅದು ಜನತೆಗೆ ಸ್ವಯಂ ನಿರ್ಣಯ ಕೈಗೊಳ್ಳುವ ಅಧಿಕಾರ ಪಡೆವ ಹಾದಿಯಲ್ಲಿ ಅಡ್ಡ ನಿಲ್ಲುವ ಪ್ರಯತ್ನವಷ್ಟೇ ಎಂದು ಕಂಡುಕೊಂಡಿದ್ದೇನೆ" (ಅದೇ, ಪುಟ-೧೦೭).

'ರಾಮರಾಜ್ಯ ಕೀ ಕಥಾ' ಹಾಗೂ 'ಗಾಂಧಿವಾದ್ ಕೀ ಶವ ಪರೀಕ್ಷಾ' ಇವುಗಳಲ್ಲಿ ಈ ವಿಷಯದ ಮೇಲೆ ವಿಸ್ತ್ರತವಾದ ವ್ಯಾಖ್ಯೆಗಳಿವೆ.

ಒಟ್ಟಿನಲ್ಲಿ ನೋಡಿದಾಗ ಯಶಪಾಲರ ಎಲ್ಲ ಬರಹಗಳು ತಾನು ಬಾಳಿದ ಯುಗದ ಪ್ರಹರಿಯಾಗಿವೆ. ನಮ್ಮ ದೇಶದ ಪ್ರಾಚೀನ ಇತಿಹಾಸದಲ್ಲಿ ಜನಸಾಮಾನ್ಯರ ಹೋರಾಟಗಳ ಹಾಗೂ ಶಾಸಕರ ಪಿತೂರಿಗಳ ವಿವರಗಳು ಸಿಗುವುದು ಬಹು ಸ್ವಲ್ಪ. ಆದರೆ ವರ್ತಮಾನದ ಸಂಘರ್ಷಗಳ ಸಂದರ್ಭದಲ್ಲಿ ಯಶಪಾಲರಂತಹ ಲೇಖಕರು ಹಿಂದಿನಂತಾಗಲು ಬಿಡದೆ, ಈ ಯುಗದ ನೈಜ ಚಿತ್ರಗಳಿಗೆ ತಮ್ಮ ಗ್ರಂಥಗಳಲ್ಲಿ ಪ್ರಾಣ ತುಂಬಿದ್ದಾರೆ. ಆದುದರಿಂದ ಆಧುನಿಕತೆಯ ಸಮೀಕ್ಷಾತ್ಮಕ ವಾಸ್ತವ ಇತಿಹಾಸವು ಬರೆಯಲ್ಪಡುವಾಗ ಹಾಗೂ ಸಮಾಜವಾದಿ ಭಾರತವು ನಿರ್ಮಾಣಗೊಂಡ ಪ್ರಕ್ರಿಯೆಯ ಸತ್ಯಾಂಶಗಳನ್ನು ಗುರ್ತಿಸುವಾಗ, ಅದಕ್ಕೆ ಅಗತ್ಯವಾದ ಪ್ರಾಮಾಣಿಕ ದಸ್ತಾವೇಜುಗಳು ಹಾಗೂ ಮನುಷ್ಯನ ಮನಸ್ಸಿನಲ್ಲಿ ನಡೆದ ಅಂತರ್ದ್ವಂದ್ವಗಳ ಕಥೆ ಸಿಗುವುದು ಇಲ್ಲಿಯಷ್ಟೇ. ಇದೇ ವಿಚಿತ್ರ ಲೇಖಕನ ಅಸದೃಶ್ಯವೆನಿಸುವ ಬಹುಮುಖಿ ಪರಿಚಯವೂ ಆಗುತ್ತದೆ.

## ವಾಸ್ತವವಾದದ ಒರೆಗಲ್ಲಿ ಪರೀಕ್ಷೆ

ಹಿಂದಿಯಲ್ಲಿ ಸ್ವಚ್ಛಂದ ವಾದಿ ಯುಗ ಹೆಜ್ಜೆ ಇಡುತ್ತಿದ್ದಂತೆ ಮುಕ್ತವಾಗಲು ಸತತ ಪ್ರಯತ್ನ ನಡೆದಿತ್ತು. ಈ ಸಂದರ್ಭದಲ್ಲಿ ಕಾಮ ಸಂಬಂಧಗಳ ನೈತಿಕತೆಗೆ ಅಂಟಿಕೊಂಡಿದ್ದ ಸಾಮಂತೀ ಯುಗದ ಬಂಧನಗಳು ಕಳಚಿಕೊಳ್ಳಹತ್ತಿದ್ದವು. ಸ್ತ್ರೀಯು ತಾನು ಕ್ರಯ-ವಿಕ್ರಯದ ವಸ್ತು ಮಾತ್ರ ಎಂಬ ಸ್ಥಿತಿಯನ್ನು ಧಿಕ್ಕರಿಸಿದಳು. ಅವಳು ತನ್ನ ಅಸ್ತಿತ್ವದ ಮೂಲಗಳನ್ನು ಅರಸಿಕೊಂಡು, ಅದನ್ನು ಕಾಪಾಡಿಕೊಳ್ಳುವ ಹಾಗೂ ವಿಕಾಸಗೊಳಿಸಿಕೊಳ್ಳುವ ಪ್ರಯತ್ನಗಳಲ್ಲಿ ತನ್ನನ್ನು ತೊಡಗಿಸಿಕೊಂಡಳು. ಪಶ್ಚಿಮ ರಾಷ್ಟ್ರಗಳಲ್ಲಿ ಹೆಣ್ಣು ಗಂಡುಗಳ ಸೆಕ್ಸ್ ಸ್ವಾತಂತ್ರ್ಯದ ಬಗ್ಗೆ ನಡೆದ ಆಂದೋಳನಗಳ ಪ್ರಭಾವ ಇಲ್ಲೂ ಬೀಳಲು ಆರಂಭವಾಗಿತ್ತು. ಆದರ್ಶವಾದ ಹಾಗೂ ಅಶ್ಲೀಲತೆ, ನಿಸರ್ಗವಾದ ಹಾಗೂ ವಾಸ್ತವವಾದಗಳ ನಡುವಿನ 'ತುಮುಲಗಳು' ಇಲ್ಲಿನ ಬರಹಗಾರರಲ್ಲೂ ಕಂಡು ಬಂದವು. ಪ್ರಸಾದರ 'ಕಂಕಾಲ್', ನಿರಾಲಾ ಅವರ 'ಅಲಕಾ' ಮತ್ತು ಶರಚ್ಚಂದ್ರರ ಕಾದಂಬರಿಗಳು, ಈ ದೇಶದಲ್ಲಿ ಹುಟ್ಟುತ್ತಿರುವ ಹೊಸ ಮಾನವನ ಮಾನಸಿಕ ಬೇಡಿಕೆಗಳೇನೆಂಬುದನ್ನು ನಿರೂಪಿಸಿದವು. ಸ್ತ್ರೀ-ಪುರುಷರ ನಡುವೆ ಸಮಾನ ಅಧಿಕಾರಗಳನ್ನು ಕಥಾವಸ್ತುವಾಗಿ ಉಳ್ಳ ವಿದೇಶೀ ಕೃತಿಗಳು ಇಲ್ಲೂ ಜನಪ್ರಿಯಗೊಂಡದ್ದು ಕೇವಲ ಆಕಸ್ಮಿಕವಲ್ಲ. 'ಅನ್ನಾ ಕೆರಾನೀನಾ' (ಟಾಲ್‌ಸ್ಟಾಯ್), ಹೆಣ್ಣಿನ ಹೃದಯ, (ಮೊಪಾಸಾ) ಮತ್ತು 'ಗಾಡೀ ವಾಲೋಂ ಕಾ ಕಟರಾ' (ಕುಫ್ರಿನ್) ಇವೆಲ್ಲ ಉದಾಹರಣೆಗಳು. ಈ ಹಿನ್ನೆಲೆಯಲ್ಲಿ ಹಿಂದಿಯ ಕಾದಂಬರಿಕಾರರು ಹೆಣ್ಣು ಗಂಡಿನ ಸಂಬಂಧಗಳನ್ನು ಸಹಜವಾಗಿಸಲು, ಬಲು ಕಟ್ಟುನಿಟ್ಟಾದ ಮಾನ್ಯತೆಗಳನ್ನೂ ಮತ್ತು ಸಾಮಾಜಿಕ ಸಂಸ್ಥೆಗಳನ್ನು ಟೀಕಿಸಹತ್ತಿದರು.

ಪ್ರಗತಿಶೀಲ ಆಂದೋಳನ ಆರಂಭಗೊಂಡಾಗ ಈ ಎಲ್ಲ ತಥ್ಯಗಳ ಪರೀಕ್ಷಣ ಆರಂಭಗೊಂಡಿತ್ತು. ಈ ಸಂದರ್ಭದಲ್ಲಿ ಮಾರ್ಕ್ಸ್ ಮತ್ತು ಫ್ರಾಯ್ಡ್‌ನ ಪ್ರಭಾವ ಭಾರತೀಯ ಸಮಾಜದಲ್ಲಿ ಒಟ್ಟೊಟ್ಟಿಗೆ ಕಂಡು ಬಂದಿತು. ಹೀಗಾಗಿ ಅಲ್ಲಲ್ಲಿ ವಿಚಿತ್ರ ತರ್ಕಗಳು ಹುಟ್ಟಿಕೊಂಡವು. ಜೀವನದ ಬೇರೆಲ್ಲ ಕ್ಷೇತ್ರಗಳಲ್ಲಿ ಇವೆರಡರ ನಿಲುವು ಬೇರೆ ಬೇರೆಯಾಗಿದ್ದರೂ ಕಾಮಸಂಬಂಧಗಳ ವಿಷಯ ಬಂದಾಗ ಇವೆರಡರಲ್ಲಿ ಮೂಲಭೂತ ವಿರೋಧವಿಲ್ಲ ಎಂದು ಕೆಲವರು ಅಂದರು. 'ನಯಾ ಸಾಹಿತ್ಯ ಔರ್ ನಾರೀ' ಮತ್ತು 'ಸಾಹಿತ್ಯ ಔರ್ ನಾರೀ ಕೀ ಸಮಸ್ಯಾ' ಮೊದಲಾದ ಪ್ರಬಂಧಗಳು ಹೊರಬಿದ್ದು ಇವುಗಳ ಬಗ್ಗೆ ಭಿನ್ನ ಭಿನ್ನ ಅಭಿಪ್ರಾಯಗಳು ವ್ಯಕ್ತಗೊಂಡವು. ಈ ನಿಟ್ಟಿನಲ್ಲಿ ಎರಡು ಬಣಗಳು ಸ್ಪಷ್ಟವಾಗಿ ಕಾಣಿಸಿಕೊಂಡವು. ಯಶಪಾಲ್, ಮುಲ್ಕರಾಜ್ ಆನಂದ್, ಪಹಾಡೀ, ಅಂಚಲ್, ನರೋತ್ತಮ

ನಾಗರ್ ಹಾಗೂ ಕೃಷ್ಣಚಂದರ್ ಅಂತಹ ಲೇಖಕರು ಒಂದು ಕಡೆ ಆದರೆ, ಇನ್ನೊಂದು ಕಡೆ ರಾಮವಿಲಾಸ್ ಶರ್ಮಾ, ಕೇದಾರನಾಥ್ ಅಗ್ರವಾಲ್, ಹಂಸರಾಜ್ ರಹಬಲ್ ಇವರೆಲ್ಲ ಇನ್ನೊಂದು ಬಳಗಕ್ಕೆ ಸೇರಿದವರಾದರು. ಮೊದಲ ಬಣದವರು ಈ ವಿಷಯದಲ್ಲಿ ಜೋಲಾ, ಫ್ಲಾಬೆಯರ್ ಮತ್ತು ಲಾರೆನ್ಸ್ ಅವರ ವಿಚಾರಗಳನ್ನು ಒಪ್ಪುತ್ತಿದ್ದರು. ಸ್ವಚ್ಛವಾದ ಲೋಟದಲ್ಲಿನ ಸ್ವಚ್ಛ ಜಲ ಎಂಬ ಲೆನ್ನಿನನ ಸೂತ್ರವನ್ನು ಕೆಲವು ಮಾರ್ಕ್ಸ್‌ವಾದಿಗಳು ಕಾಮಸಂಬಂಧದ ಸ್ವತಂತ್ರತೆ...ೂ ಅನ್ವಯಿಸಿದರು. ರಾಮವಿಲಾಸ್ ಶರ್ಮಾ ಅವರು ಇದನ್ನು ಖಂಡಿಸಿ, ಬರೆದರು -"ಹಸಿವು, ಬಾಯಾರಿಕೆ ಹಾಗೂ ನಿದ್ದೆಯಂತೆ 'ಸೆಕ್ಸ್' ಹಂಬಲ ಕೂಡ ತೃಪ್ತಿ ಪಡೆಯಬೇಕು. ಆದರೆ 'ಬೀದಿ ಬಿದ್ದು' ಇದನ್ನು ತಣಿಸಿಕೊಳ್ಳುವುದರಲ್ಲಿ 'ವಾಸ್ತವದಲ್ಲಿ' ಸ್ವಚ್ಛವಾದ ಲೋಟದಲ್ಲಿ ಸ್ವಚ್ಛವಾದ ಜಲವನ್ನು ಕುಡಿಯಬೇಕೆಂಬ ಸಿದ್ಧಾಂತ ಶ್ರೀಮಂತರು ದಿನನಿತ್ಯ ಅವುಲಿಗೆ ತರುತ್ತಿರುವ 'ಸೆಕ್ಸ್'ನ್ನು ಕುರಿತಾದ ಬಂಡವಾಳಶಾಹೀ ಸಿದ್ಧಾಂತವೇ ಆಗಿದೆ" (ಪ್ರಗತಿಶೀಲ ಸಾಹಿತ್ಯ ಕೀ ಸಮಸ್ಯಾಯೇಂ, ಪು...-೧೧೯). ೧೯೪೯ರಲ್ಲಿ ಭಿವಂಡಿಯಲ್ಲಿ ನಡೆದ ಪ್ರಗತಿಶೀ... ಲೇಖಕರ ಸಂಘದ ಅಧಿವೇಶನದಲ್ಲಿ ಈ ವಿಷಯದಲ್ಲಿದ್ದ ಅಭಿಪ್ರಾಯ ಭೇದಗಳು ಹೊರಬಂದವು.

ಯಶಪಾಲರು ತಮ್ಮ ಕೃತಿಗಳಲ್ಲಿ ಸೆಕ್ಸ್‌ನ ಸಂದರ್ಭಗಳನ್ನು ಬಹಳಷ್ಟು ಬಳಸಿಕೊಂಡಿರುವುದನ್ನು ಕಂಡು ವಿಮರ್ಶಕರು ಇವರ ... 'ಸೆಕ್ಸ್'ನ ಪ್ರ... ಹೆಚ್ಚು ಬಿದ್ದಿದೆ ಅಂದರು. ಯಶಪಾಲರ ವಾಸ್ತವವಾದಿ ನಂಬಿಕೆಗಳಲ್ಲಿ ಈ ವಿಚಾರಗಳು ಪೂರಕವೇ ಇಲ್ಲ ಬಾಧಕವೇ? ಅವರಲ್ಲಿ ಕೆಳಹುಟ್ಟಿದ ಬಂಡವಾಳಶಾಹಿ ಪ್ರವೃತ್ತಿಗಳು ಪಳಿಯುಳಿಕೆಗಳಾಗಿ ಉಳಿದುಕೊಂಡಿವೆಯೇ? ಅಥವಾ ಈ ವರ್ಜಿತ ಕ್ಷೇತ್ರಕ್ಕೂ ಬರಹಗಾರ ಅಧಿಕಾರಿಕವಾಗಿ ದಿಟ್ಟ ಹೆಜ್ಜೆ ಇಟ್ಟಿದ್ದಾನೆಯೇ? ಎಂಬೆಲ್ಲ ಪ್ರಶ್ನೆಗಳು ಏಳುತ್ತವೆ. ಇದನ್ನು ಪರೀಕ್ಷಿಸಿ ನೋಡಲು ಮತ್ತೊಮ್ಮೆ ಯಶಪಾಲರ ವಿಚಾರಗಳು ಹಾಗೂ ಪಾತ್ರಗಳ ನಮೂನೆಗಳನ್ನು ನೋಡಬೇಕಾಗುತ್ತದೆ. ಅವರು ತಮ್ಮ ಪುಸ್ತಕ ಮಾರ್ಕ್ಸ್‌ವಾದದಲ್ಲಿ ಬರೆದಿದ್ದಾರೆ -"ಮಾರ್ಕ್ಸ್‌ವಾದವು ಸ್ತ್ರೀ-ಪುರುಷ ಸಂಬಂಧಗಳನ್ನು ಪುರುಷನ ಸಂಪತ್ತಾಗಿಸುವ ಅಥವಾ ಧರ್ಮದ ಭಯಕ್ಕೆ ಸಿಕ್ಕಿಸುವ ಪಕ್ಷವನ್ನು ವಹಿಸುವುದಿಲ್ಲ. ಅದು ಹೆಣ್ಣು-ಗಂಡಿನ ಸಂಬಂಧವನ್ನು ನಿಸರ್ಗದತ್ತ ಅಗತ್ಯತೆ ಹಾಗೂ ಕರ್ತವ್ಯಗಳ ನಡುವಣ ಸಂಬಂಧವೆಂದು ತಿಳಿಯುತ್ತದೆ. ಹೀಗಾಗಿ ಈ ಇಬ್ಬರಲ್ಲಿ ಯಾರೊಬ್ಬರೂ ಇನ್ನೊಬ್ಬರಿಗೆ ದಾಸರಾಗುವುದು ಅಗತ್ಯ ಎಂದುತಿಳಿಯುವುದಿಲ್ಲ.ಹಾಗೆಯೇ ಹೆಣ್ಣು ಗಂಡುಗಳ ಸಂಬಂಧದಲ್ಲಿ ಹದ್ದು ಮೀರಿದ ಸ್ವೇಚ್ಛಾವೃತ್ತಿಯನ್ನುಅದು ಸರಿ ಎಂದು ಒಪ್ಪಿಕೊಳ್ಳುವುದಿಲ್ಲ (ಪುಟ ೫೨).

ಯಶಪಾಲರು ಈ ನಿಲುವನ್ನು ಸಮರ್ಥಿಸಲು ಬಹುವಿಧವಾಗಿ ಪಾತ್ರಗಳನ್ನು

ಸೃಷ್ಟಿಸಿದರು. ಅವ... ಮನೋಇಚ್ಛೆಗಳಿಗೆ ಅಡ್ಡವಾಗಿದ್ದ ಒಡ್ಡನ್ನು ಕಡಿದರು. ಅವರ ಮಾನಸಿಕತೆಗೆ ಆರೋಗ್ಯವನ್ನು ನೀಡಿದರು. ಅವರೆಲ್ಲಾ ಯಾವನನ್ನೋ ತನ್ನ ಒಡೆಯನೆಂದಾಗಲಿ, ಅಥ... ದಾಸಿಯೆಂದಾಗಲಿ ಹೇಳಿಕೊಳ್ಳುವ ಮನಸ್ಥಿತಿಯಿಂದ ಹೊರಬಂದರು. ಪುರುಷ ಪ್ರಧಾನ ಸಮಾಜದಲ್ಲಿ ನೈತಿಕ ಮೌಲ್ಯಗಳನ್ನು ಶ್ರೀಮಂತಿಕೆ ಹಾಗೂ ಗಂಡಿನ ಪಕ್ಷಕ್ಕೆ ಹೊಂದಿಸಿಡಲಾಗಿದೆ. ಈ ಮೌಲ್ಯಗಳಿಗೆ ಸ್ಥಾಯಿತ್ವ ನೀಡಲೆಂದು ಧರ್ಮವನ್ನು ಬಳಸಿಕೊಳ್ಳಲಾಗಿದೆ. ಯಶಪಾಲರು ಆರ್ಯ ಸಮಾಜದಲ್ಲಿದ್ದುಕೊಂಡು ಇವನ್ನೆಲ್ಲ ಬಹು ಚೆನ್ನಾಗಿ ನೋಡಿದ್ದರು. ಯಶಪಾಲರು ಆರ್ಯಸಮಾಜದ ಆಶ್ರಮದಲ್ಲಿರದೆ ಹೋಗಿದ್ದರೆ ಹಾಗೂ ಬಾಲ್ಯದಲ್ಲಿ ಅವರನ್ನು ಈ ರೀತಿಯ ನೈತಿಕತೆಗೆ ಕಟ್ಟಿ ಹಾಕದೆ ಹೋಗಿದ್ದರೆ ಹಾಗೂ ಅವರು ಈ ಬಂಧನಗಳ ಒಳಪದರಗಳನ್ನು ತಮ್ಮದೇ ದೃಷ್ಟಿಯಿಂದ ನೋಡಲಾಗದಿದ್ದರೆ, ತಮ್ಮ ಕೃತಿಗಳನ್ನ ಈ ಕ್ಷೇತ್ರದಲ್ಲಿ ನಡೆದಾಡಿಸುವುದು ಸಾಧ್ಯವಾಗುತ್ತಿರಲಿಲ್ಲ ಎಂಬ ಮಾತು ಸುಸ್ಪಷ್ಟ. ಈ ವಿಷಯ ಅವರ ಮನೋಭೂಮಿಯಲ್ಲಿ ಮೂಲಗ್ರಂಥಿಯಾಗಿ ಕುಳಿತುಬಿಟ್ಟಿತ್ತು. ಹೀಗಾಗಿ ಅದನ್ನು ಬಿಚ್ಚಿ ಸ್ಪಷ್ಟತೆ ನೀಡುವುದು ಅವರಿಗೆ ಮುಖ್ಯ ಕರ್ತವ್ಯವೆನಿಸಿತು. ಅನೇಕ ಕಥೆಗಳಲ್ಲಿ ಹಾಗೂ ಪ್ರಾಯಶಃ ಎಲ್ಲ ಕಾದಂಬರಿಗಳಲ್ಲಿ ಈ ಸಮಸ್ಯೆಯನ್ನು ಅವರು ತಂದರು. ಹಾಗೂ ಕಾಮ ಸಂಬಂಧಗಳ ಸಹಜ ಸ್ವಾತಂತ್ರ್ಯವನ್ನು ಕ್ರಾಂತಿಕಾರಿ ಪ್ರಯತ್ನಗಳಲ್ಲಿ ತೊಡಗಿದ್ದ ಪಾತ್ರಗಳಿಗೇ ತಳಕು ಹಾಕಿದರು. ಇವಕ್ಕಿಂತ ಬೇಕಾದ ಪಾತ್ರಗಳಲ್ಲೂ ಈ ಪ್ರವೃತ್ತಿಯನ್ನು ಕಾಣಿಸಿದರಾದರೂ, ಈ ಭೋಗೇಚ್ಛಕ ಪಾತ್ರಗಳು ತಮ್ಮ ತಮ್ಮ ನಿಜರೂಪದಲ್ಲಿ ಬಯಲಿಗೆ ಬಂದವು. ಉದಾಹರಣೆಗೆ 'ದಾದಾ ಕಾಮ್ರೇಡ್' ಕಾದಂಬರಿಯ ಹರೀಶ ಮತ್ತು ಶೈಲ್, 'ಪಾರ್ಟಿ ಕಾಮ್ರೇಡ್' ಭವಾರಿಯಾ ಹಾಗೂ ಗೀತಾ, 'ಮನುಷ್ಯ ಕೀ ರೂಪ್'ನ ಧನಸಿಂಹ ಮತ್ತು ಸೋಮಾ, 'ದಿವ್ಯಾ'ದಲ್ಲಿ ದಿವ್ಯಾ ಮತ್ತು ಪೃಥುಸೇನ್, 'ಕ್ಯೂಂ ಫಂಸೇ'ದಲ್ಲಿ ಭಾಸ್ಕರ್, ಮೋತೀ, ಹೇನಾ ಈ ಪಾತ್ರಗಳು ಬಂದಿರುವುದನ್ನು ಕಾಣಬಹುದು. ಈ ಕಾದಂಬರಿಗಳಲ್ಲಿ ಈ ಎಲ್ಲ ಪಾತ್ರಗಳೂ ತಮ್ಮ ದೇಹದ ಬಯಕೆಯನ್ನು ತೀರಿಸಿಕೊಳ್ಳಲು ಎಡತಾಕುತ್ತವೆ, ನಿಜ; ಆದರೆ ಅದು ಅಷ್ಟೇ ಆಗಿ ಆ ಪಾತ್ರಗಳು ನಿಲ್ಲುವುದಿಲ್ಲ. ಅವರು ತಮ್ಮ ಕೆಲಸಗಳಲ್ಲಿ ತೊಡಗಿದ್ದು ಜೀವನ ಸ್ಥಿತಿಗಳ ನಡುವೆ ತಮ್ಮ ಅವಶ್ಯಕತೆಗಳನ್ನು ಸಹ ಈಡೇರಿಸಿಕೊಳ್ಳುತ್ತವೆ. ಇಲ್ಲಿ ಹೆಣ್ಣಿನ 'ಪಾತ್ರ'ಗಳು ಬಹುವಾಗಿ ಬಿಚ್ಚಿಕೊಳ್ಳುತ್ತವೆ. ಅವು ತಮ್ಮ ಬಿಡುಗಡೆಗಾಗಿ ಹೋರಾಟ ನಡೆಸುತ್ತವೆ. ಪುರುಷನು ಅವರನ್ನು ತನ್ನ ಅಧಿಪತ್ಯದಲ್ಲಿಟ್ಟುಕೊಳ್ಳಬೇಕೆಂದು ಹವಣಿಸಿದ ಸಂದರ್ಭಗಳಲ್ಲಿ ಅವನನ್ನು ತ್ಯಜಿಸುತ್ತವೆ. ಪಾತಿವ್ರತ್ಯದ ಪ್ರಶ್ನೆಗೆ ಅವು ಹೊಸ ಅರ್ಥವಂತಿಕೆಯನ್ನು ನೀಡುತ್ತವೆ. ಭಾರತೀಯ ಪರಂಪರಾಗತ ಸಮಾಜದಲ್ಲಿ ವಿಧವೆಯ ಎಲ್ಲ ಮಾನವೀಯ ಅಧಿಕಾರಗಳನ್ನು ಕಸಿದುಕೊಳ್ಳಲಾಗಿದೆ. ಬಾಲವಿಧವೆಯರು ಕೂಡ ವಿಧವೆಯರಾದ ಕ್ಷಣದಲ್ಲೇ ತಮ್ಮ ಅಧಿಕಾರಗಳನ್ನು

ಕಳೆದುಕೊಳ್ಳುತ್ತಾರೆ. 'ಮೃತ್ಯುಂಜಯು', 'ಜಾದೂ ಕೀ ಚಾವಲ್', 'ಎಕ್ ಸಿಗರೇಟ್', 'ವೈಷ್ಣವೀ' ಮೊದಲಾದ ಕಥೆಗಳಲ್ಲಿ ವಿಧವೆಯರ ದುಃಸ್ಥಿತಿಯನ್ನು ಚಿತ್ರಿಸಲಾಗಿದೆ. ಅವರು ನೈಸರ್ಗಿಕವಾದ ಆಕಾಂಕ್ಷೆಗಳನ್ನು ಹತ್ತಿಕ್ಕಿಕೊಂಡು ಒಳಗೊಳಗೇ ಮುಮ್ಮಲು ಮರುಗುತ್ತಾರೆ. ಹೆಣ್ಣು ಮಕ್ಕಳು ಕಪ್ಪಾಗಿದ್ದರೆ ಅಥವಾ ಮುಖದ ಮೇಲೆ ಸಿಡುಬಿನ ಕಲೆಗಳು ಉಳಿದು ಹೋದರೆ ಅವರನ್ನು ಮದುವೆ ಆಗಲು ಯಾರೂ ತಯಾರಾಗುವುದಿಲ್ಲ. ಅವರನ್ನು ಭೋಗಿಸಲು ಸಿದ್ಧ. ಆದರೆ ಮದುವೆ ಮಾತ್ರ ಬೇಡ. ಶ್ರೀಮಂತರು ತಮ್ಮ ಮಕ್ಕಳಿಗಿಂತಲೂ ವರದಕ್ಷಿಣೆಯನ್ನೇ ಹೆಚ್ಚು ಅಪ್ಯಾಯಮಾನವಾಗಿ ಕಾಣುತ್ತಾರೆ. ಹೀಗಾಗಿ ಬಡವರ ಹೆಣ್ಣು ಮಕ್ಕಳು ಗುಣವತಿಯರಾಗಿದ್ದರೂ ವರದಕ್ಷಿಣೆ ಕೊಡಲಾಗದ ಕಾರಣ ಜೀವನಪರ್ಯಂತ ಮದುವೆ ಇಲ್ಲದೆ ಕುಮಾರಿಯರಾಗಿ ಉಳಿದುಕೊಳ್ಳುತ್ತಾರೆ. ಎಷ್ಟೋ ಹೆಣ್ಣು ಮಕ್ಕಳು ಅನಾಥೆಯರಾಗಿ ವೇಶ್ಯಾವಾಟಿಕೆಗಳನ್ನು ಸೇರಿಕೊಳ್ಳುತ್ತಾರೆ. ಯಶಪಾಲರ ದೃಷ್ಟಿಯಲ್ಲಿ ಹೆಣ್ಣಿನ ದಾಸ್ಯ ಸಾಮಂತವಾದ ಬಂಡವಾಳಶಾಹಿಯ ಕೊಡುಗೆ. ಈ ವ್ಯವಸ್ಥೆಯು ಪುರುಷನಿಗೆ ಸ್ತ್ರೀಗಿಂತ ಹೆಚ್ಚಿನ ಸ್ಥಾನಮಾನ ಹಾಗೂ ಅಧಿಕಾರಗಳನ್ನು ನೀಡಿದೆ. ಈ ವ್ಯವಸ್ಥೆಯೇ ಕಾಮ ಸಂಬಂಧ ಅಧಿಕಾರಗಳಲ್ಲಿ ಏಕಪಕ್ಷೀಯವಾಗಿ ಅಧಿಕಾರವನ್ನು ಸೃಷ್ಟಿಸಿದೆ. ಇದರಲ್ಲಿ ಹೆಣ್ಣಿಗೆ ಸ್ವಾತಂತ್ರ್ಯವಿಲ್ಲ. ಪುರುಷನ ಮೇಲೆ ಯಾವುದೇ ನಿರ್ಬಂಧವಿಲ್ಲ. ಈ ವಿಷಯದಲ್ಲಿ ಇಬ್ಬರಿಗೂ ಸಮಾನ ಸ್ವಾತಂತ್ರ್ಯ ಸಿಗಲೆಂದು ಯಶಪಾಲರು ಪ್ರಯತ್ನಿಸಿದ್ದಾರೆ.

ತನ್ನ ನಂಬುಗೆಗಳಿಗನುಗುಣವಾಗಿ ಅವರು ಹರೀಶನ ಮುಂದೆ ಶೈಲಳ ನಿರಾವರಣಗೊಳ್ಳುವಿಕೆ, (ದಾದಾ ಕಾಮ್‌ರೇಡ್) ಹಾಗೂ 'ಕ್ಯೂಂ ಫಂಸೇ' ಒಳಗೆ ಮೋತಿ ಮತ್ತು ಭಾಸ್ಕರ್, ಹಾಗೂ ಹೇನಾ ಮತ್ತು ಭಾಸ್ಕರರ ನಡುವಣ ಸಂಬಂಧಗಳ ಬಗ್ಗೆ ಎದ್ದ ಪ್ರಶ್ನೆಗಳಿಗೂ ಉತ್ತರ ನೀಡಿದ್ದಾರೆ. ಅವರು ನೀಡಿದ ಉತ್ತರ ಹೀಗಿದೆ; "ನೀವು ಪೃಥುಸೇನನ ಮುಂದೆ ದಿವ್ಯಾಳು ಆತ್ಮಸಮರ್ಪಣೆ ಮಾಡಿಕೊಳ್ಳುವ ಕಥೆಯ ಸಂಭವವನ್ನು ಕ್ಷಮಿಸಿ ಬಿಡುತ್ತೀರಿ. ಆದರೆ ಶೈಲಳು ಹರೀಶನಿಗೆ ತನ್ನನ್ನು ಸಮರ್ಪಿಸಿಕೊಳ್ಳುವಿಕೆ ಆವಶ್ಯಕ ಎಂದು ತಿಳಿಯುವುದಿಲ್ಲ. ನನ್ನ ದೃಷ್ಟಿಯಲ್ಲಿ ಇಂತಹ ಪ್ರಸಂಗದಲ್ಲಿ ಆತ್ಮಸಮರ್ಪಣೆ ಎಂಬ ಶಬ್ದವೇ ಭ್ರಾಮಕವಾದುದು. ನಾರಿಯ ಪಾಲಿಗೆ ಸದಾ ಸಮರ್ಪಣೆ ಏಕೆ? ಅವಳಿಗೆ ಪಡೆಯಬೇಕೆಂಬ ಬಯಕೆ ಉಂಟಾಗಬಹುದಲ್ಲವೇ? ತನಗೆ ಬೇಕೆನಿಸಿದ್ದನ್ನು ಪಡೆಯುವ ಅಧಿಕಾರದಿಂದ ಅವಳನ್ನು ಯಾಕೆ ವಂಚಿತಳಾಗಿಸಬೇಕು? ಶೈಲ ಯಾವನೊಬ್ಬನ ಸಂಪತ್ತಿಯಲ್ಲ. ಒಂದು ವ್ಯಕ್ತಿ. ಅವಳ ಇಚ್ಛೆಗೂ ಮಹತ್ವವಿದೆ. ಅವಳು ಭಯದಿಂದ, ಪ್ರಲೋಭನದಿಂದ ಅಥವಾ ಕ್ಷಣಿಕ ಭೋಗದಿಂದ ಅಥವಾ ಯಾರನ್ನೋ ಮೋಸಗೊಳಿಸಲೆಂದೋ ಹೀಗೆಲ್ಲ ಮಾಡುವುದಿಲ್ಲ. ಅವಳು ಚೆನ್ನಾಗಿ ಯೋಚಿಸಿ, ವಿಚಾರಮಾಡಿ ತಾನು ಬಯಸಿದ್ದನ್ನು ಹೊಂದುವ್ಯವಸ್ಥೆಯಲ್ಲಿರುವ

ಅಡೆತಡೆ ಹಾಗೂ ಪರಿಣಾಮಗಳನ್ನು ಅರ್ಥ ಮಾಡಿಕೊಂಡೇ ಮುಂದಡಿ ಇಟ್ಟವಳು" (ಯಶಪಾಲ್ ಕೇ ಪತ್ರ, ಸಂ. ಮಧುರೇಶ, ಪುಟ ೫೧-೫೨). ಲೈಂಗಿಕ ಸಂಬಂಧಗಳ ಬಗೆಗೆ ಅವರೆನ್ನುತ್ತಾರೆ -"ಬಹು ದಿನಗಳಿಂದಲೂ ಪರಂಪರೆಯಾಗಿ ಬಂದಿರುವ ಲೈಂಗಿಕ ಸಂಬಂಧಗಳನ್ನು ಕುರಿತಾದ ಮಾನ್ಯತೆಗಳನ್ನೇ ಶಾಶ್ವತ ಸತ್ಯವೆಂದು ಒಪ್ಪಲಾಗುವುದಿಲ್ಲ. ಅವು ವಿಶೇಷ ಪರಿಸ್ಥಿತಿಗಳಲ್ಲಿ ಸಾಮಾಜಿಕ ಸುವ್ಯವಸ್ಥೆಗೆ ಅಗತ್ಯವೆನಿಸಿ ಒಪ್ಪಿಕೊಳ್ಳಲಾಗಿದ್ದವು. ಅಂದಿಗೂ ಇಂದಿಗೂ ಪರಿಸ್ಥಿತಿಗಳು ಎಷ್ಟು ಬದಲಾಗಿವೆ. ಎಲ್ಲಕ್ಕಿಂತ ದೊಡ್ಡ ಬದಲಾವಣೆ ಅಂದರೆ ವ್ಯಕ್ತಿ ಹಾಗೂ ಸಮಾಜದ ಬಲವಾದ ಶಕ್ತಿ ಎನಿಸಿದ್ದ ಸಂತತಿ ವಿಸ್ತಾರವು ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಬಹು ಭಯಂಕರವಾದ ಸಾಮಾಜಿಕ ಕುತ್ತಾಗಿದೆ. ಮಾನವನ 'ಕಾಮ ತೃಷೆ'ಯನ್ನು ಯಾವುದೇ ವಿಕಾಸ ಅಥವಾ ವಿಜ್ಞಾನದ ಪ್ರಗತಿ ತಡೆಯುವುದು ಅಸಂಭವ. ಹೀಗಿರುವಾಗ ಅವ್ಯವಸ್ಥೆಗೆ ಮೂಲ ಕಾರಣವಾಗಿರುವ ಸ್ಥಿತಿಯಲ್ಲಿ ಕಾಮ ಸಂಬಂಧವಾದ ಧೋರಣೆಗಳ ಮೂಲಕ ವ್ಯಕ್ತಿಯನ್ನು ನಿರ್ಬಂಧಕ್ಕೊಳಪಡಿಸುವುದು ಸಂಗತವೆನಿಸುವುದೇ ?" "ಜನಸಂಖ್ಯಾ ಸ್ಫೋಟದ ರಾಹು ನಮ್ಮನ್ನು ಕಬಳಿಸಲು ಕಾದಿರುವ ಈ ಸಂದರ್ಭದಲ್ಲಿ ಸಮಾಜದ ಒಳಿತಿಗಾಗಿ ಸ್ತ್ರೀ-ಪುರುಷರು ಬೆರೆಯುವ ಶೇ.೯೯ ಸಂದರ್ಭಗಳನ್ನು ಪರಿಣಾಮದಿಂದ ಮುಕ್ತವಿಡಬೇಕಾದದ್ದು ಅಗತ್ಯ ಎಂದೇ ನನ್ನ ಮತ" (ಅದೇ, ಪುಟ-೯೦). ಯಶಪಾಲರು ಲೈಂಗಿಕ ಸಂಬಂಧಗಳನ್ನು ಕಾಮುಕತೆಯಷ್ಟಕ್ಕೇ ತಳಕು ಹಾಕಿ ಬಿಡುವುದಿಲ್ಲ ಎಂಬುದನ್ನು ಪ್ರತ್ಯೇಕಿಸಿ ನೋಡಬೇಕಾಗುತ್ತದೆ. ಇದನ್ನು ಸ್ವೇಚ್ಛಾವೃತ್ತಿಗೆ ಪರ್ಯಾಯವಾಗಿಸುವುದು ಅವರಿಗೆ ಬೇಡಾಗಿದೆ. ಅವರೆನ್ನುವಂತೆ ಈ ಸಂಬಂಧಗಳು ಪೂರ್ಣತೆಗಾಗಿಯೇ ಹೊರತು ವಿಲಾಸಕ್ಕಾಗಿಯಾಗಲಿ, ಹವ್ಯಾಸಕ್ಕಾಗಲಿ ಆಗಬಾರದೆನ್ನುತ್ತಾರೆ. ಈ ಎಲ್ಲ ಸಂಬಂಧಗಳ ಗುರಿ ಹೆಣ್ಣಿನ ಗುಪ್ತ ಚಟುವಟಿಕೆಗಳನ್ನು ತಡೆಯುವುದು ಹಾಗೂ ವೇಶ್ಯಾವಾಟಿಕೆಗಳ ಅಪರಾಧಗಳನ್ನು ನಿಲ್ಲಿಸುವುದು. ಲೆನಿನ್ ಅಂದಿದ್ದರು -"ಲೈಂಗಿಕ ಜೀವನದಲ್ಲಿ ಸ್ವೇಚ್ಛಾಚಾರ ಎನ್ನುವುದು ಬಂಡವಾಳಶಾಹಿ ರೀತಿಯೇ. ಅದು ಅಧಃಪತನದ ಲಕ್ಷಣ. 'ಶ್ರೀಸಾಮಾನ್ಯ ಶಕ್ತಿ ಉದಿಸುತ್ತಿರುವ ವರ್ಗಶಕ್ತಿ' ಅದನ್ನು ಅನುಭವರಹಿತವಾಗಿಸುವ ಅಥವಾ ಉದ್ರೇಕಗೊಳಿಸುವ ಯಾವುದೇ 'ಮಾದಕತೆ' (ನಶೆ)ಯ ಅಗತ್ಯವಿಲ್ಲ" (ನಾರೀ ಮುಕ್ತಿ, ಪ್ರಗತಿ ಪ್ರಕಾಶನ, ಮಾಸ್ಕೋ ೧೩೫). ಬಂಡವಾಳಶಾಹೀ ಅಧಃಪತನವಾದೀ ಪ್ರವೃತ್ತಿಗಳು ತಮ್ಮ ಕೃತಿಗಳಲ್ಲಿ ಬಾರದಿರಲಿ ಎಂಬುದೇ ಯಶಪಾಲರ ಮನೋಗತವಾಗಿತ್ತು. ನಿಸರ್ಗದತ್ತ ಆಕಾಂಕ್ಷೆಗಳನ್ನು ತಣಿಸಿಕೊಳ್ಳಲು ಹಾತೊರೆವ ಹೆಂಗೆಳೆಯರನ್ನೇ ಅವರ ದೃಷ್ಟಿ ಕಂಡುಕೊಳ್ಳುತ್ತಿತ್ತು. ಇಂದಿನ ಕಟ್ಟುಪಾಡಿನಲ್ಲಿ ಅವಳು ಹೆಳವಳು. ಹೀಗಾಗಿ ತನ್ನ ಕಾಂಕ್ಷೆಗಳಿಗೆ ಅವಳು ತೃಪ್ತಿ ನೀಡುವುದು- ಯಾರಿಗೂ ಕಾಣದಂತೆ ಒಂದು, ಅವಳು ಉನ್ಮಾದದ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹೋಗುತ್ತಾಳೆ; ಹಾಗಿಲ್ಲವಾದರೆ ಯಾವುದೋ ಗಂಡಿನ

ಬೆನ್ನು ಬಿದ್ದು ಓಡಿ ಹೋಗುತ್ತಾಳೆ. ತನಗಿಷ್ಟಬಂದವನನ್ನು ಪತಿಯಾಗಿ ಹೊಂದಲು ಸಾಧ್ಯವಾಗದ ಪರಿಸ್ಥಿತಿಯಲ್ಲಿ ಅವಳು ಗೃಹಿಣಿಯಾಗಿದ್ದುಕೊಂಡು ಪರಪುರುಷಗಾಮಿನಿಯಾಗುತ್ತಾಳೆ. ವಿರಸ ದಾಂಪತ್ಯದ ಸ್ಥಿತಿಗಳನ್ನು ತೆರೆದಿಡುವ ಎಷ್ಟೋ ಕಥೆಗಳಿವೆ. ಉದಾಹರಣೆಗೆ ನಾವು 'ತೀಸರೀ ಚಿಂತಾ', 'ಔರತ್', 'ಸೋಮಾ ಸಾಹಸ್', 'ಪುರಷ್ ಭಗವಾನ್', ಹಾಗೂ 'ಮಿಟ್ಟೀ ಕೀ ಅಂಕೊ'ವನ್ನು ಕಾಣಬಹುದು. ಗುಡ್ಡಗಾಡಿನ ಲೈಂಗಿಕ ಸಮಸ್ಯೆಗಳನ್ನೆತ್ತಿಕೊಂಡು ಬರೆದ ಕಥೆಗಳು 'ದುಃಖೀ ದುಃಖೀ', 'ಹಲಾಲ್ ಕಾ ಟುಕಡಾ', 'ಗಂಡೇರೀ' ಹಾಗೂ ವೇಶ್ಯೆಯರ ಕಷ್ಟಗಳನ್ನು ಕುರಿತ 'ಭಾಗ್ಯಚಕ್ರ' ಮೊದಲಾದವು.

ಯಶಪಾಲರ ಕಥಾ ಸಾಹಿತ್ಯದ ಮೌಲ್ಯಾವಲೋಕನ ಮಾಡಿದಾಗ ಎರಡು ರೀತಿಯ ವಿಚಾರಧಾರೆಗಳನ್ನು ಕಾಣಬಹುದು.

"ಯಶಪಾಲರ ಪಾತ್ರಗಳು ಜನಜೀವನದ ಪ್ರತಿನಿಧಿಗಳಲ್ಲ. ಇವು ಸೆಕ್ಸ್ ಮತ್ತು ಆತ್ಮಪೀಡನವನ್ನು ಮುಖ್ಯ ಸಮಸ್ಯೆಯನ್ನಾಗಿ ಹೊಂದಿರುವ ವರ್ಗದ ಪಾತ್ರಗಳು" (ರಾಮ್‌ವಿಲಾಸ್ ಶರ್ಮಾ, ಪ್ರಗತಿಶೀಲ್ ಸಾಹಿತ್ಯ ಕೀ ಸಮಸ್ಯಾಯೇಂ, ಪುಟ-೧೧೯). "ಯಶಪಾಲ್ ಅವರು ಜೀವನದ ಪ್ರತ್ಯಕ್ಷ ಅನುಭವಗಳ ಪ್ರಯೋಗವನ್ನು ಕೇವಲ ವಸ್ತುವಿನ ಆಯ್ಕೆಗಷ್ಟೇ ಮಿತಿಗೊಳಿಸಿಕೊಳ್ಳುತ್ತಾರೆ. ಹೀಗೆ ಆಯ್ಕೆ ಮಾಡಿಕೊಂಡ ವಸ್ತುವಿಗನುರೂಪವಾಗಿ ಅವರ ಸಂಪೂರ್ಣ ವಿಷಯವಸ್ತುಗಳನ್ನು ಕಲ್ಪನೆಯಿಂದ ನಿರ್ಮಿಸಿಕೊಳ್ಳುತ್ತಾರೆ. ಘಟನೆಗಳನ್ನು ನಿರ್ಮಿಸುವಲ್ಲಿ ಯಶಪಾಲರ ಸೃಜನಾತ್ಮಕ ಕಲ್ಪನೆಯೇ ಅವರ ಸೃಷ್ಟಿ ಪ್ರಕ್ರಿಯೆಯ ಮೂಲ ಸೂತ್ರವಾಗಿದೆ. ಯಶಪಾಲರು ಹಾಗೂ ಬೇರೆ ತತ್ಕಾಲೀನ ಬರಹಗಾರರು ಪ್ರೇಮಚಂದ್ರರಿಂದ ಆಧಾರಭೂತವಾದ ಪೃಥಕತೆಯನ್ನು ಹೊಂದಿರುವುದು ಅವರುಗಳ ಸೃಜನಪ್ರಕ್ರಿಯೆಯಲ್ಲಿನ ಈ ತೆರನಾದ, ಅಂತರದ ಕಾರಣದಿಂದಲೇ. 'ದೋ ಮುಂಹ್ ಕೀ ಬಾತ್', 'ತುಮ್‌ನೇ ಕ್ಯೂಂ ಕಹಾ ಥಾ, ಮೈಂ ಸುಂದರ್ ಹೂಂ', 'ಧರ್ಮರಕ್ಷಾ' ಮೊದಲಾದ ಕಥೆಗಳು ಸತ್ಯಕಥೆಗಳ ಆಯ್ಕೆ ಎಂದಲ್ಲ. ಲೇಖಕರ ಸೃಜನಾತ್ಮಕ ಕಾಲ್ಪನಿಕತೆ ವಿಷಯುಗತವಾದ ಅಂತರ್ವಿರೋಧಗಳಿಗನುಗುಣವಾದ ಘಟನೆಗಳನ್ನು ಸೃಷ್ಟಿಸಿಕೊಂಡಿದೆ(ಸುರೇಂದ್ರ ಚೌಧರೀ, ಹಿಂದೀ ಕಹಾನೀಃ ಪ್ರಕ್ರಿಯಾ ಔರ್ ಪಾಠ್, ಪುಟ-೫೭). ಯಶಪಾಲರ ಸಾಹಿತ್ಯ ಮೂಡಿಸಿದ್ದ ಪ್ರಭಾವವನ್ನು ಕಂಡುಕೊಂಡ ಮೇಲೆ ಸುರೇಂದ್ರ ಚೌಧರೀ ಅವರು ಅದರ ಬಗ್ಗೆ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು. ಆದರೆ ರಾಮ್‌ವಿಲಾಸ್ ಶರ್ಮಾ ಮೇಲೆ ನಾಲ್ಕು ಐದನೆಯ ದಶಕಗಳ ಪ್ರಭಾವವಷ್ಟೇ ಇದ್ದು ಅಂದಿನ ವಾಗ್ಯುದ್ಧ (ಪೋಲಿಮಿಕ್ಸ್) ಫ್ರಾಯ್ಡ್‌ನ ಜಾಲಕ್ಕೆ ಸಿಕ್ಕಿಕೊಳ್ಳುವ ಅಪಾಯುದಂತಹ ಸ್ಥಿತಿಯಲ್ಲಿತ್ತು. ಅಪಾಯ ಸಾಮೀಪ್ಯ ಹೆಚ್ಚಿದಂತೆ ಅದರ ಬಗ್ಗೆ ವಹಿಸುವ ಎಚ್ಚರವೂ ಅಷ್ಟೇ ಕಟ್ಟುನಿಟ್ಟಾದದ್ದು.

ಯಶಪಾಲರು ತಮ್ಮ ಅನುಭವಗಳನ್ನು ಕಾಲ್ಪನಿಕತೆಯಿಂದ ಸೃಷ್ಟಿಸಿದರು ಎಂಬುದಾಗಿ ಇಂದು ಹೇಳುವುದು ಸುಲಭವಾದೀತು. ಹಾಗೆ ನೋಡಿದರೆ ಯಥಾರ್ಥದ ಈ ನೆಲವೂ ವಿಕಾಸ ಮೂಲದಿಂದ ಆದದ್ದೇ.

ಯಶಪಾಲರ ಕಥಾ ಸಾಹಿತ್ಯದಲ್ಲಿ ಧರ್ಮ ಪ್ರಸಂಗದಂತಹ ಇನ್ನೊಂದು ಪಕ್ಷವೂ ಇದೆ. ಧರ್ಮವಾಸ್ತವದಲ್ಲಿ ವರ್ಗೀಯ ಹಿತಗಳನ್ನು ರಕ್ಷಿಸುವಲ್ಲಿ ನೆರವಾಗುತ್ತದೆ. ಅವರು 'ಭಗವಾನ್ ಕಿಸ್ ಕೇ' ತರದ ಕಥೆಗಳನ್ನು ಬರೆದರು. 'ಧರ್ಮರಕ್ಷಾ' ಮತ್ತು 'ಜ್ಞಾನ್‌ದಾಸ್' ಕಥೆಗಳಲ್ಲಿ ತಥಾಕಥಿತ ಧರ್ಮ ವರ್ಗೀಯ ಪರಿಣಾಮಗಳನ್ನು ಬಯಲು ಮಾಡಿದರು. ಜೀವನದ ವಾಸ್ತವಿಕ ಸ್ಥಿತಿಗಳು ಎದುರಾದಾಗ ಮಾಯೆ ಹಾಗೂ ಬ್ರಹ್ಮ ಹೇಳ ಹೆಸರಿಲ್ಲವಾದವು.

ವರ್ಗೀಯ ಸಂಬಂಧಗಳಲ್ಲಿ ಹೆಚ್ಚಿನ ಆಲೆತ ಮಧ್ಯವರ್ಗದಲ್ಲಿ ಕಾಣುತ್ತದೆ. ಇದು ಎರಡು ಮೂಲ ವರ್ಗಗಳಿಗೂ ತಾಗಿಸಿಕೊಂಡು ಜಾಗೃತವಾಗಿ ಉಳಿಯದಿದ್ದರೆ ತಳವಿಲ್ಲದ ಚೊಂಬಿನಂತಾಗುತ್ತದೆ. ಅರ್ಥಹೀನ ಮಹತ್ವಾಕಾಂಕ್ಷೆಗಳು ಇವರಲ್ಲಿ ಪೊಳ್ಳು ಗೌರವದ ಸಂಸ್ಕಾರಗಳನ್ನು ಸೃಷ್ಟಿಸುತ್ತದೆ. 'ಪರದಾ', 'ಗಂಡೇರಿ', 'ಕಾಲಾ ಆದಮೀ', 'ರೋಟೀ ಕಾ ಮೋಲ್', 'ದೇವೀ ಕೀ ಲೀಲಾ' ಹಾಗೂ 'ಮಕ್ಖೀ ಯಾ ಮಕಡೀ' -ಈ ಎಲ್ಲ ಕಥೆಗಳು ಈ ವರ್ಗದ ದೌರ್ಬಲ್ಯಗಳನ್ನು ಕಾಣಿಸಿಕೊಟ್ಟು ಅವರು ಇಚ್ಛಿಸಿದಲ್ಲಿ ಪರಿಸ್ಥಿತಿಗಳನ್ನು ಅರ್ಥ ಮಾಡಿಕೊಂಡು ಸರಿಯಾದ ದಾರಿ ಹಿಡಿಯಬಹುದೆಂಬುದನ್ನು ತೋರಿಸಿಕೊಡುತ್ತದೆ. 'ಆದಮೀ ಯಾ ಪೈಸಾ' ಕಥೆಯ ಒಂದು ಪಾತ್ರ ಪತ್ರಕರ್ತ ರಾಮ್‌ಬಾಬೂ ಹೇಳುತ್ತಾನೆ -"ನಾನು ೧೫೦೦ರೂ.ಗಳಿಗೆ ನನ್ನ ದುಡಿಮೆಯನ್ನು ಮಾರಿಕೊಂಡಿದ್ದೇನೆ. ಆದರೆ ನಾನು ನನ್ನ ಬಂಡವಾಳಶಾಹಿ ಒಡೆಯನ ಕೈಯೊಳಗಿನ ಚಾಟಿ ಇದ್ದಂತೆ. ನನ್ನ ಯಜಮಾನ ನನ್ನನ್ನು ಜನಾಭಿಪ್ರಾಯ ಮೂಡಿಸಬಲ್ಲ ದುಬಾರಿ ಮಿಷನ್ ಎಂದು ತಿಳಿಯುತ್ತಾನೆ ಹಾಗೂ ಅದನ್ನು ತನ್ನ ಸಾಮಾಜಿಕ ಹಾಗೂ ರಾಜಕೀಯ ಶಕ್ತಿಯನ್ನು ಬಲವಾಗಿ ಹಿಡಿದಿಟ್ಟುಕೊಳ್ಳಲು ಬಳಸುತ್ತಾನೆ" (ಚಿತ್ರ ಕಾ ಶೀರ್ಷಕ್, ಪುಟ-೩೩).

ಯಶಪಾಲರ ಲೇಖಣಿ ವಾಸ್ತವದ ಅನೇಕ ಸ್ಥಿತಿಗಳನ್ನೂ ಹಾಗೂ ಪ್ರವೃತ್ತಿಗಳನ್ನೂ ಗ್ರಹಿಸಿಕೊಳ್ಳುತ್ತದೆ. ಅದರಲ್ಲಿ ಕೃಶಗೊಳ್ಳುತ್ತಿರುವ ಕಾರ್ಮಿಕರು, ಗುಡ್ಡಗಾಡಿನ ಕೂಲಿಯಾಳುಗಳು, ಶಹರುಗಳಲ್ಲಿ ರಿಕ್ಷಾ ನಡೆಸುವವರು, ಶ್ರಮಜೀವಿಗಳು, ರೈತರು ಎಲ್ಲಾ ಬರುತ್ತಾರೆ. ಇದರಲ್ಲಿ ವಿಷಯ ಬಾಹುಲ್ಯವಿಲ್ಲ ಎಂಬುದು ನಿಜ. ಕಾದಂಬರಿಗಳಲ್ಲಿ ಯಶಪಾಲರು ತಮ್ಮ ಸಮಕಾಲೀನ ಇತಿಹಾಸವನ್ನು ಮಾನವ ಜೀವನದ ಐತಿಹಾಸಿಕ ಸ್ಥಿತಿಗಳಿಗೆ ಗಂಟು ಹಾಕುತ್ತಾರೆ. ಹಾಗೂ ಇತಿಹಾಸದಲ್ಲಿ ವರ್ತಮಾನವನ್ನು ಹುಡುಕಲು ಹವಣಿಸುತ್ತಾರೆ. 'ಪಾರ್ಟಿ ಕಾಮ್‌ರೇಡ್', 'ದೇಶದ್ರೋಹೀ'. 'ಮನುಷ್ ಕೇ ರೂಪ್'. 'ಝೂಠಾ ಸಚ್'

'ಮೇರೀ ತೇರೀ ಉಸಕೀ ಬಾತ್' -ಇವುಗಳಲ್ಲೆಲ್ಲಾ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಇತಿಹಾಸವೇ ಕಾಣುತ್ತದೆ. ಈ ಇತಿಹಾಸ ತನ್ನೊಳಗೆ ಮೊದಲಿನಿಂದ ಕಾಡುತ್ತಾ ಬಂದಿರುವ ಎಲ್ಲ ರೋಗ ರುಜಿನಗಳನ್ನೂ ಮತ್ತು ಅಂತರ್ವಿರೋಧಗಳನ್ನು ಮೈಗೂಡಿಸಿಕೊಂಡಿದೆ. ಆದುದರಿಂದಲೇ ದೇಶದ ವಿಭಜನೆಯ ಚಿತ್ರದಲ್ಲಿ ಮತೀಯ ಶಕ್ತಿಗಳ ಗುಣಲಬ್ಧ ನಮಗೆ ಬಹಳ ಸ್ಪಷ್ಟವಾಗಿ ಕಂಡು ಬರುತ್ತದೆ. ಸಾಮಂತೀ ಹಾಗೂ ಬಂಡವಾಳಶಾಹೀ ಶಕ್ತಿಗಳು ಮೈಳೈಸಿಕೊಂಡಿರುವ ರೀತಿಯನ್ನು ಬಯಲು ಮಾಡುವಲ್ಲಿ ಯಶಪಾಲರು ಪ್ರೇಮಚಂದರಿಗಿಂತ ಮುಂದಿದ್ದಾರೆ. ಯಶಪಾಲರ ಕಮ್ಯೂನಿಸ್ಟ್ ಪಾತ್ರಗಳು ಅವರ ಬಹಳಷ್ಟು ಕೃತಿಗಳಲ್ಲಿ ಪ್ರವೇಶ ಪಡೆಯುವುದಕ್ಕೆ ಮುಂಚೆಯೇ ರೂಪುಗೊಂಡವಲ್ಲ. ಅವು ಇಲ್ಲಿ ಸೃಜನಗೊಂಡ ನಂತರವೇ ಆಕಾರ ಪಡೆಯುತ್ತವೆ. ಅವರನ್ನು ಸೃಷ್ಟಿಸುವ ಪ್ರಕ್ರಿಯೆಯಲ್ಲೇ ಲೇಖಕರು ವೈಚಾರಿಕತೆಯ ಸೂತ್ರಗಳನ್ನು ಬಿಡಿಸಿಡುತ್ತಾರೆ. ಅವರ ಅಭಿಪ್ರಾಯದಲ್ಲಿ ಅನೇಕ ಸಲ ವಿಚಾರಗಳನ್ನೇ ಪಾತ್ರಗಳಲ್ಲಿ ಇಳಿಯಬಿಡುತ್ತಾರೆ. ತಮ್ಮ ಧ್ಯೇಯಗಳನ್ನು ಪಾತ್ರಗಳಲ್ಲಿ ಬಿಡಿಸಿಡುತ್ತಾರೆ. "ಮಾರ್ಕ್ಸ್‌ವಾದವನ್ನು ನಾಶ ಮಾಡಬೇಕೆಂದು ಉದ್ದೇಶ್ಯ ಹೊಂದಿ ಮಾರ್ಕ್ಸ್‌ವಾದವನ್ನು ಅರಿಯಬಯಸುತ್ತೇನೆ. ಆದುದರಿಂದ ನನಗೆ ಮಾರ್ಕ್ಸ್‌ವಾದವನ್ನು ತಿಳಿಸಿ ಹೇಳಿರಿ" ಎಂದು ಜೈನೇಂದ್ರರು ಯಶಪಾಲರಿಗೆ ಹೇಳಿದ್ದರು. ಕೆಲವರು ಮಾರ್ಕ್ಸ್‌ವಾದೀ ತತ್ತ್ವಾರ್ಥಗಳನ್ನು ಅರಿತುಕೊಳ್ಳುವುದಕ್ಕೆ ಮೊದಲೇ ಅವರೊಡನೆ ಬಡಿದಾಟ ಮಾಡಬೇಕೆಂದು ನಿರ್ಣಯ ಮಾಡಿಕೊಂಡಿರುತ್ತಾರೆ ಎಂಬುದಕ್ಕೆ ಉದಾಹರಣೆಯಾಗಿ ಯಶಪಾಲರು ಜೈನೇಂದ್ರರ ಈ ಘಟನೆಯನ್ನು ಹೇಳಿದ್ದರು. ತಮ್ಮ ಕಾದಂಬರಿಗಳಲ್ಲಿ ಯಶಪಾಲರು ಇಂತಹ ಪಾತ್ರಗಳನ್ನು ತರುತ್ತಾರೆ. ಆ ಪಾತ್ರಗಳು ಪರಿಸ್ಥಿತಿಗಳ ಕಾರಣ ಕಲಿಯುತ್ತಾ ಕಲಿಯುತ್ತಾ ತಾವೇ ವಿಚಾರಗಳನ್ನು ಸೃಷ್ಟಿ ಮಾಡುವವರಾಗುತ್ತವೆ. ಅವರು ಈ ಮಾತನ್ನು ಜೈನೇಂದ್ರರಿಗೂ ಹೇಳಿದ್ದರು -"ಮಾನವ ಸಮಾಜ ಪರಂಪರೆಯಿಂದ ಬಂದ ವಿಚಾರಗಳ ದಾಸ್ಯವಲ್ಲ: ಅದು ತನ್ನದಾದ ವಿಚಾರಧಾರೆಗಳನ್ನು ಸೃಷ್ಟಿಸಿಕೊಳ್ಳುತ್ತದೆ ಎಂಬ ಅಂಶವನ್ನು ಸ್ಪಷ್ಟಪಡಿಸಲೆಂದೇ ನಾನು ಕಾದಂಬರಿಗಳನ್ನು ಬರೆಯುತ್ತೇನೆ. ಸಮಾಜ ಜೀವನದಲ್ಲಿ ಸಂಭವಿಸುವ ಘಟನೆಗಳನ್ನು ಕಾದಂಬರಿಯ ಪರೀಕ್ಷಣ ಪಾತ್ರಗಳಲ್ಲಿಟ್ಟು ಈ ಘಟನೆಗಳಿಂದ ನಮ್ಮ ವಿಚಾರಧಾರೆಗಳು ಹೇಗೆ ಬದಲಾವಣೆ ಹೊಂದುತ್ತವೆ ಅಥವಾ ಹೊಸ ಅನುಭವಗಳು ಯಾವ ರೀತಿ ಹೊಸ ವಿಚಾರಧಾರೆಗಳಿಗೆ ಜನ್ಮ ನೀಡುತ್ತವೆ ಎಂಬುದನ್ನು ತೋರಿಸಬಯಸುತ್ತೇನೆ" (ದೇಖಾ-ಸೋಚಾ-ಸಮಝಾ, ಪುಟ-೯೫).

ಯಶಪಾಲರು ತಮ್ಮ ಕಾದಂಬರಿಗಳನ್ನು ಬರೆಯುವ ಯೋಜನೆ

ಹಾಕಿಕೊಂಡಾಗಲೇ ವಿಚಾರಗಳ ವೈಚಾರಿಕತೆಯನ್ನೇ ವೈಶಿಷ್ಟ್ಯವಾಗಿ ಉಳ್ಳ ವಿಕಾಸಶೀಲ ಪ್ರಕ್ರಿಯೆಗಳನ್ನು ಆಯ್ಕೆ ಮಾಡಿಕೊಂಡಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಈ ಆಯ್ಕೆಗಳನ್ನು ತಮ್ಮ ಪಾತ್ರಗಳ ಮೂಲಕ ಪರೀಕ್ಷೆಗೆ ಒಳಪಡಿಸಿದ್ದಾರೆ. ಯಶಪಾಲರು ವಿಷಯವನ್ನು ಎಲ್ಲಿಂದಲೇ ಎತ್ತಿಕೊಳ್ಳಲಿ ಅವರ ಗುರಿ ಮಾತ್ರ ಶೋಷಿತರೂ, ಪೀಡಿತರೂ ಆದವರ ಶಕ್ತಿಯನ್ನು ಸಂಘಟಿಸುವದಾಗಿತ್ತು. ಕೆಳವರ್ಗಕ್ಕೆ ಸೇರಿದ ಅವರ ಪಾತ್ರಗಳು ಅಥವಾ ಕಮ್ಯೂನಿಸ್ಟ್ ಪಾತ್ರಗಳು ಈ ಶಕ್ತಿಯನ್ನು ಸಂಚಯುಗೊಳಿಸಿಕೊಳ್ಳುತ್ತವೆ ಎಂಬುದನ್ನು ಕಾಣಬಹುದು. 'ನ್ಯಾಯ ಕಾ ಸಂಘರ್ಷ್'ದಲ್ಲಿರುವ ಅನೇಕ ಪ್ರಬಂಧಗಳಲ್ಲಿ ಅವರು ಈ ರೀತಿಯ ಶಕ್ತಿ ಸಂಚಯುವನ್ನು ಕುರಿತು ಮತ್ತೆ ಮತ್ತೆ ಬರೆದಿದ್ದಾರೆ.

ಯಶಪಾಲರ ಬರಹ ಮೊದಲಾಗಿನಿಂದ ಕಡೆಗೊಳ್ಳುವವರೆಗೂ ಹೋರಾಟದ ಅಸ್ತ್ರಗಳಂತೆ ನಮ್ಮ ಮುಂದೆ ನಿಲ್ಲುತ್ತದೆ. ಅವರ ಸಾಹಿತ್ಯದಲ್ಲಿ ಸಮಾಜದ ನಾನಾ ತೆರನಾದ ವಿಸಂಗತಿಗಳ ಲೆಕ್ಕಾಚಾರವೇ ನಮಗೆ ಕಂಡು ಬರುತ್ತದೆ. ಸಾಮ್ರಾಜ್ಯಶಾಹೀ ಶಕ್ತಿಯೊಂದಿಗೆ ಸೆಣಸುತ್ತಿರುವಾಗಲೂ ಅವರು ತಮ್ಮೊಳಗೆ ನಡೆಯುತ್ತಿದ್ದ ಸಮರವನ್ನು ನಿಲ್ಲಿಸಲಿಲ್ಲ. ಮಾನವನ ಮನದಲ್ಲಿ ತರಹವಾರಿ ಅಸಮಾನತೆಯ ಸಂಸ್ಕಾರಗಳನ್ನು ಬಿತ್ತಿದ್ದ ವ್ಯವಸ್ಥೆಯೊಂದಿಗೆ ಅವರ ಅಂತರ್ಯುದ್ಧದ ಯುದ್ಧ ನಡೆದೇ ಇತ್ತು. ಅಸಮಾನತೆಯ ಪ್ರಶ್ನೆಗಳನ್ನು ಪ್ರೇಮಚಂದ್ ಅವರು ರೈತ-ಜಮೀನ್ದಾರ, ಸ್ಪೃಶ್ಯ-ಅಸ್ಪೃಶ್ಯ, ಧರ್ಮ ಮತ್ತು ಸಂಸ್ಥೆಗಳು, ಕಾರ್ಮಿಕ-ಒಡೆಯ ಇವರೆಲ್ಲರ ನಡುವಿನಿಂದ ಎತ್ತಿಕೊಂಡದ್ದು. ಆದರೆ ಯಶಪಾಲರು ಕ್ರಾಂತಿಕಾರಿ ಸಂಘಟನೆಗಳನ್ನು ಕಲ್ಪಿಸಿಕೊಂಡು ಈ ಪ್ರಶ್ನೆಗಳ ಮುಂದೆ ಸವಾಲಾಗಿ ನಿಂತು ಸಮರ ಸಾರಿದರು. ಅವರು ಹೆಣ್ಣಿನ ಬಿಡುಗಡೆಯ ಸಮಸ್ಯೆಗೆ ಹೆಚ್ಚು ಗಮನವಿತ್ತು ಅವರ ಮೇಲೆ ಹೇರಲಾಗಿದ್ದ ಇತಿಮಿತಿಗಳನ್ನು ಹೂತು ಹಾಕಿದರು. ಅವರ ಬರಹಗಳು ಮೊದಲು ವಿಮರ್ಶಾತ್ಮಕ ವಾಸ್ತವವಾದದ ತೆರದಲ್ಲಿ ಪ್ರಾರಂಭಗೊಂಡು ನಂತರ ಕ್ರಮವಾಗಿ ಸಮಾಜವಾದೀ ಯಥಾರ್ಥವಾದದ ಗಡಿಗಳನ್ನು ಹೊಕ್ಕವು. ವಿಮರ್ಶಾತ್ಮಕ ವಾಸ್ತವವಾದಿಯಾಗಿ ಯಶಪಾಲರು ಹೆಣ್ಣು ಗಂಡಿನ ಲೈಂಗಿಕ ಸಂದರ್ಭಗಳಲ್ಲಿನ ಅಸಹಜ ವಿಕೃತಿಗಳನ್ನು ಟೀಕಿಸಿದ್ದಾರೆ. ಅವರ ದೃಷ್ಟಿಯಲ್ಲಿ ಈ ವಿಕೃತಿಗಳು ಬಂಡವಾಳಶಾಹೀ ಹಾಗೂ ಸಾಮಂತೀ ವರ್ಗದ ನೈತಿಕತೆಯ ಕೊಡುಗೆಯಾಗಿವೆ. ಈ ವಿಮರ್ಶೆಯನ್ನು ಅವರು ಸಕ್ರಿಯವಾಗಿ ತಮ್ಮ ಪಾತ್ರಗಳಲ್ಲಿ ಪ್ರವೇಶ ಮಾಡಿಸುತ್ತಾರೆ. ನೀತಿವಾದಿಗಳನ್ನು ಕೆಣಕುತ್ತಾರೆ. ವ್ಯಂಗ್ಯ ಹಾಗೂ ಕಟಕಿಯನ್ನು ಬಳಸಿಕೊಂಡು ಈ ಪಾತ್ರಗಳು ತಮ್ಮನ್ನು ಸಹಜಗೊಳಿಸಿಕೊಳ್ಳುತ್ತವೆ. ಉಳಿದ ಆರೋಪಗಳನ್ನು ಹೇಗೋ ಹಾಗೆಯೇ ಇವುಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಆ ಪಾತ್ರಗಳು

ತಮ್ಮ ಕೆಲಸವೇನಿದೆಯೋ ಅದರಲ್ಲಿ ತೊಡಗಿಸಿಕೊಳ್ಳುತ್ತವೆ. ಲೈಂಗಿಕ ಸಂಬಂಧಗಳು ಏರ್ಪಟ್ಟಾಗ ಅವುಗಳನ್ನು ಮುಚ್ಚಿಕೊಳ್ಳಲು ಪ್ರಯತ್ನಿಸುವುದಿಲ್ಲ. ಇಂತಹ ಸಂಬಂಧಗಳನ್ನು ಪ್ರೇಮವಾಗಿ ಬದಲಿಸಿಕೊಳ್ಳುತ್ತವೆ. ಪ್ರೇಮ ಎನ್ನುವುದು ರೂಪಾಂತರಣ ಹೊಂದುವ ಪ್ರಕ್ರಿಯೆ ಆಗುತ್ತದೆ. ಪ್ರೇಮಭಾವನೆ ಬಂಡವಾಳಶಾಹೀ ಸಂಸ್ಕೃತಿಯಂತೆ ಬರೇ ಭೋಗೇಚ್ಛೆಯಾಗಿ ಉಳಿದುಕೊಳ್ಳುವುದಿಲ್ಲ. ಶ್ರೀಮಂತ ವರ್ಗದ ಗಂಡು ಹೆಣ್ಣುಗಳು ತಮ್ಮ ವರ್ಗವನ್ನು ಬದಲಿಸಿಕೊಳ್ಳುತ್ತವೆ. ವೈಚಾರಿಕವಾಗಿ ಶ್ರೀಸಾಮಾನ್ಯರೊಡನೆ ಒಂದಾಗಿ ಬಿಡುತ್ತವೆ. ಆದರೆ ತಮ್ಮ ವೈಯಕ್ತಿಕ ಜೀವನದಲ್ಲಿ ಕುಬ್ಜರಾಗಿ ಹೋಗುವುದಿಲ್ಲ. ನಿಸರ್ಗ ಸಹಜವೆನಿಸುವ ಆವಶ್ಯಕತೆಗಳನ್ನು ಒದಗಿಸಿಕೊಳ್ಳುವಾಗ ಹಿಂಜರಿಯುವುದಿಲ್ಲ. ಕೆಲವು ಪಾತ್ರಗಳು ತಾವು ಮದುವೆಯಾಗುವುದಿಲ್ಲವೆಂದು ಆರಂಭದಲ್ಲೇ ನಿರ್ಣಯಿಸಿಕೊಂಡಿರುತ್ತವೆ. ಕಮ್ಯೂನಿಸ್ಟ್ ಪಾರ್ಟಿಯ ಕೆಲಸದಲ್ಲಿ ತೊಡಗಿಸಿಕೊಳ್ಳುವ ಉದ್ದೇಶದಿಂದ ಮದುವೆಯಿಂದ ದೂರವಿರುವುದಾಗಿ ನಿಶ್ಚಯಿಸಿಕೊಂಡಿರುತ್ತವೆ. ಆದರೆ ಪಾರ್ಟಿಯಲ್ಲಿ ಕೆಲಸ ಮಾಡಬೇಕಾದಾಗಲೂ ಮಾನವ ಸ್ವಭಾವದ ಸಹಜಗುಣವನ್ನು ಹೊಂದಿರಬೇಕಾದದ್ದು ಅಗತ್ಯ. ಹಾಗೂ ಯಾವುದೇ ರೀತಿಯ ಮನೋಗ್ರಂಥಿಯೂ ಇದಕ್ಕೆ ಅಡ್ಡಿಯಾಗುತ್ತದೆ ಎಂಬ ಅರಿವು ಆ ಪಾತ್ರಗಳಿಗೆ ಬಹುಬೇಗ ಉಂಟಾಗುತ್ತದೆ. ಯಶಪಾಲರು ಈ ರೀತಿಯ ಪ್ರಕ್ರಿಯೆಯನ್ನು ತಮ್ಮ ಕ್ರಾಂತಿವಾದಿ ಚಿಂತನೆಯ ಅಂಗವಾಗಿ ಪೂರ್ಣ ಎಚ್ಚರದಿಂದ ನಿರ್ಣಯಿಸಿಕೊಂಡಿದ್ದರು. ಅದನ್ನು ಸಂಪೂರ್ಣ ಆತ್ಮವಿಶ್ವಾಸದಿಂದ ಕಡೆಯವರೆಗೂ ನಿರ್ವಹಿಸಿಕೊಂಡು ಬಂದರು. ಅವರು ಕ್ರಾಂತಿಕಾರಿ ಮನೋಭೂಮಿಕೆಯಲ್ಲಿ ತಮ್ಮ ಪಾತ್ರಗಳನ್ನು ಸೃಷ್ಟಿಸಿದರು. ಅವರು ಹೀಗೆ ಮಾಡದೆ ಹೋಗಿದ್ದರೆ, ಅವರ ಪಾತ್ರಗಳ ಒಳಗಡೆ ಕೊಳಚೆ ತುಂಬಿಕೊಳ್ಳುತ್ತಿತ್ತು. ಅದರಲ್ಲಿ ಅಸಂತೋಷ, ಒಳಗುದಿ, ನೋವು, ಏಕಾಂತತೆ ಹಾಗೂ ಬೇಸರಗಳು ಕ್ರಿಮಿಗಳಾಗಿ ವಿತರಗುಟ್ಟುತ್ತಿದ್ದವು. ತಮ್ಮ ಕಾಮತೃಷೆಯನ್ನು ತಣಿಸಿಕೊಳ್ಳಲು ಯಾವ ರೀತಿಯ ಗೌಪ್ಯವನ್ನೂ ಅಗತ್ಯವೆಂದು ಬಯಸದ ಸರ್ವಸಾಧಾರಣ ಮನುಷ್ಯನನ್ನು ಗಮನದಲ್ಲಿಟ್ಟುಕೊಂಡು ಯಶಪಾಲರು ಪ್ರಾಯಶಃ ಅವನನ್ನು ಶ್ರೀಸಾಮಾನ್ಯನ ಶಕ್ತಿಯನ್ನಾಗಿ ಬದಲಿಸಿಬಿಡಲು ಬಯಸಿದರು. ಮಧ್ಯವರ್ಗೀಯ ಜೀವನದೊಳಗೆ ವ್ಯಾಪಿಸಿಕೊಂಡಿರುವ ಈ ವಿಕೃತಿಗಳನ್ನು ವಿರೇಚನ ಕ್ರಮದಿಂದ ತೊಡೆದು ಹಾಕಲು ಬಯಸಿದ್ದರು. ಯಶಪಾಲರ ಇಂತಹ ಎಲ್ಲ ಪಾತ್ರಗಳೂ ರೋಮ್ಯಾಂಟಿಕ್ ಸನ್ನಿವೇಶಗಳ ಮೂಲಕ ಹಾಯುತ್ತವೆ. ಮತ್ತು ಅವರಿಗೆ ಅಲ್ಲೇ ಸಂಘರ್ಷದ ದಾರಿಯೂ ಸಿಕ್ಕಿಬಿಡುತ್ತದೆ.

ನಿಸರ್ಗಸಹಜ ಜೈವಿಕ ಅಗತ್ಯಗಳನ್ನು ತಣಿಸಿಕೊಳ್ಳಬೇಕೆಂಬುದಷ್ಟೇ ಇಲ್ಲಿ ನಡೆಯುವುದಿಲ್ಲ. ಯಶಪಾಲರು ರೋಮಾನ್ಸ್ ಹಾಗೂ ವಾಸ್ತವವಾದದಲ್ಲಿ

ಯಾವ ವಿರೋಧವನ್ನೂ ಕಾಣುವುದಿಲ್ಲ. ಅವರಿಗೆ ಅರ್ನ್ಸ್ಟ್ ಫಿಶರ್ ಅವರ ಈ ಹೇಳಿಕೆ ತಿಳಿದಿದೆ -''ರೋಮಾಂಟಿಕ್ ಹಾಗೂ ರಿಯಲಿಜಂ-ರಮ್ಯತೆ ಹಾಗೂ ವಾಸ್ತವವಾದ ಒಂದಕ್ಕೊಂದು ಸಂಪೂರ್ಣ ವಿರೋಧಿಗಳಲ್ಲ. ರಮ್ಯತೆ ಸಮಾಲೋಚನಾತ್ಮಕ ವಾಸ್ತವವಾದದ ಆರಂಭದ ಸ್ಥಿತಿ. ಇವೆರಡರಲ್ಲಿ ದೃಷ್ಟಿ ಭೇದವಿಲ್ಲ. ಆದರೆ ಅನುಸರಿಸುವ ಮಾರ್ಗಗಳು ಬೇರೆ ಬೇರೆ. ಯಥಾರ್ಥವಾದದ ನೆರವಿನಿಂದ ರಮ್ಯತೆಯ ಪ್ರವೃತ್ತಿ ಹೆಚ್ಚು ವಸ್ತುಪರಕ, ತಟಸ್ಥ ಹಾಗೂ ದೂರವರ್ತಿಯಾಗುತ್ತದೆ (ದ ನೆಸಿಸಿಟೀ ಆಫ್ ಆರ್ಟ್, ಪುಟ-೧೦೩).

ಮ್ಯಾಕ್ಸಿಂ ಗಾರ್ಕಿಯವರೂ ಇಂತಹ ಧೋರಣೆಗಳನ್ನೇ ಅಭಿವ್ಯಂಜಿಸಿದ್ದಾರೆ. ಸಮಾಜವಾದೀ ವೈಯಕ್ತಿಕತೆಯನ್ನು ಒಳಗೊಂಡ ಪಾತ್ರಗಳನ್ನು ಆರಿಸುತ್ತಾರೆ, ಸೃಷ್ಟಿಸುತ್ತಾರೆ. ಇಂತಹ ಪಾತ್ರಗಳಿಗೆ ವೈಜ್ಞಾನಿಕ ವಿವೇಚನೆ ಎಂಬುದಿದೆ ಹಾಗೂ ಅವರಲ್ಲಿ ಮೌಲಿಕತೆ ತುಂಬಿದೆ. ಪ್ರಗತಿಶೀಲ ಆಂದೋಳನದ ತರುವಾಯ, ಮಾರ್ಕ್ಸ್‌ವಾದೀ ಚಿಂತನದ ಪ್ರಭಾವದ ಕಾರಣದಿಂದಲೇ ಅವರು ಈ ರೀತಿಯ ಪಾತ್ರಗಳನ್ನು ಸೃಷ್ಟಿಸುವಂತಾಯಿತು. ಅವರ ಕಲ್ಪನಾಶಕ್ತಿ ಈ ಕಾರ್ಯದಲ್ಲಿ ಸಹಕಾರಿಯಾಯಿತು. ಸಮಾಜವಾದೀ ವಾಸ್ತವವಾದವನ್ನು ಮೈಗೂಡಿಸಿಕೊಳ್ಳುವುದರಲ್ಲಿ ಮನೋವಿಶ್ಲೇಷಕ ಪಂಡಿತರ ಸಾಧನೆಗಳನ್ನು ಇಲ್ಲವೆನ್ನಲಾಗುವುದಿಲ್ಲ. ಆದರೆ ಇವು ವ್ಯಾಪಕವಾದ ಸಮಾಜದಲ್ಲಿ ಹರಡಿಕೊಂಡಾಗಷ್ಟೇ ಉತ್ತಮ ಪರಿಣಾಮಗಳನ್ನು ನೀಡಬಲ್ಲವು. ಇದರಿಂದ ಮನುಷ್ಯನ ಸಂಪೂರ್ಣ ವ್ಯಕ್ತಿತ್ವ ನಿಚ್ಚಳಗೊಳ್ಳುತ್ತದೆ. ಸಕ್ರಿಯನಾದ ನಾಯಕ ಮೈದಳೆಯುತ್ತಾನೆ. ಹಳೆಯ ರೀತಿಯ ಆದರ್ಶವಂತ ಪಾತ್ರ ಪೋಷಣೆಗಳನ್ನು ಬಿಟ್ಟುಕೊಟ್ಟು ಹೊಸದಾದ ವಾಸ್ತವವಾದೀ ನಿರ್ದಿಷ್ಟ ಗುರಿ ಉಳ್ಳ ಪಾತ್ರ ಸೃಷ್ಟಿ ಮಾಡಿದ ಲೇಖಕರಲ್ಲಿ ಯಶಪಾಲರು ಮೊದಲಿಗರಾದ ಕಾರಣ ಅವರ ಮುಂದೆ ಕೆಲವು ಸವಾಲುಗಳಿದ್ದವು. ಅವರ ಕಾಲ್ಪನಿಕತೆಗೆ ಪರಂಪರೆಯಿಂದ ಇಂತಹ ಯಾವುದೇ ಆಧಾರವು ಕೈಗೆ ಎಟುಕಿರಲಿಲ್ಲ. ಆದುದರಿಂದ ಹಲ ಕೆಲವು ವಿಸಂಗತಿಗಳು ಅಲ್ಲಿ ಕಾಣಿಸಿಕೊಳ್ಳುವುದು ಸಹಜವೇ. ಭಾವವಾದಿ ರಮ್ಯತೆ ಹಾಗೂ ಕ್ರಾಂತಿಕಾರಿ ರಮ್ಯತೆಯನ್ನು ಬೇರ್ಪಡಿಸಿದಾಗ ಇಂತಹ ಲೋಪಗಳು ಉಳಿದುಕೊಂಡು ಬಿಡುತ್ತವೆ. ಹಲವಾರು ಲೇಖಕರ ಒಟ್ಟು ಪ್ರಯತ್ನದಿಂದಲೇ ಮಧ್ಯವರ್ಗೀಯ ಸ್ವಭಾವಗಳಿಂದ ಹೊರಬರುವುದು ಸಾಧ್ಯವಾದೀತು. ಈ ಪ್ರಯತ್ನದಲ್ಲಿ ಈಗಾಗಲೇ ಕಾಣಿಸಿಕೊಂಡಿರುವ ಶ್ರೀಸಾಮಾನ್ಯನ ಬಲಿಷ್ಠ ಸಂಘರ್ಷ ಶಕ್ತಿಯು ನೆರವಾಗಿದೆ. ಈ ಹೋರಾಟ ಎಷ್ಟು ಜೋರಿನದಾಗಬೇಕಾಗಿತ್ತೋ ಇನ್ನೂ ಅಷ್ಟು ಜೋರಿನದಾಗಿಲ್ಲ. ಈ ಕಾರಣ ತಮ್ಮ ಸೃಜನಶಕ್ತಿಯ ಸಾಮರ್ಥ್ಯವನ್ನು ತಮ್ಮ ಸ್ವಂತಿಕೆಯ ಭರವಸೆಯಿಂದಲೇ ಸಂವರ್ಧಿಸಿಕೊಳ್ಳಬೇಕಾಯಿತು. ಅವರು ಇತಿಹಾಸ ಹಾಗೂ ತನ್ನ ಕಾಲದ ಸತ್ಯಗಳನ್ನು ಕಾಲ್ಪನಿಕತೆಯ ಮೂಲಕ

ಪಾತ್ರಗಳಲ್ಲಿ ತುಂಬಿದರು ಹಾಗೂ ವಾಸ್ತವ ಜಗತ್ತಿನಲ್ಲಿ ಇನ್ನೂ ಅವಿಕಸಿತ ಸ್ಥಿತಿಯಲ್ಲಿರುವ ಈ ಪಾತ್ರಗಳನ್ನು ಬಹು ಮುಂದಕ್ಕೆ ಮುಟ್ಟಿಸಿದರು. ಈ ಕಾರಣದಿಂದಲೇ ಜನರು ಇವರನ್ನು ಫಾರ್ಮುಲಾವಾದಿ ಎಂದು ಕರೆದರು. ಆಳವಾಗಿ ನೋಡಿದಾಗ ಫಾರ್ಮುಲಾಗಳ ಕೆಲವು ಉದಾಹರಣೆಗಳು ಅಲ್ಲಿ ಸಿಗುತ್ತವೆ. ಆದರೆ ಇವಿಷ್ಟರಿಂದಲೇ ಯಶಪಾಲರ ಮಹಾನತೆ ಕುಗ್ಗಿ ಹೋಗುವುದಿಲ್ಲ. ಅವರು ನಿಸ್ಸಂದೇಹವಾಗಿ ಸಮಕಾಲೀನ ವಾಸ್ತವತೆಯ ಕುಶಲ ಚಿತ್ರಕಾರರಾಗಿದ್ದಾರೆ. ಮುಂಬರುವ ಯುಗದಲ್ಲಿ ಅವರು ನಮ್ಮೆಲ್ಲರ ಗೌರವವಾಗಿ ಉಳಿದುಕೊಳ್ಳುವರು.

# ಯಶಪಾಲರ ಕೃತಿಗಳು

## ಕಥೆಗಳು:

| | | |
|---|---|---|
| ೧. ಪಿಂಜರೇ ಕೀ ಉಡಾನ್ | ೧೯೩೯ | ವಿಪ್ಲವ್ ಕಾರ್ಯಾಲಯ,ಲಖನೌ |
| ೨. ವೋ ದುನಿಯಾಂ | ೧೯೪೧ | ” |
| ೩. ಜ್ಞಾನ್‌ದಾನ್ | ೧೯೪೩ | ” |
| ೪. ಅಭಿಶಪ್ತ | ೧೯೪೪ | ” |
| ೫. ತರ್ಕ್ ಕಾ ತೂಫಾನ್ | ೧೯೪೬ | ” |
| ೬. ಭಸ್ಮಾವೃತ್ ಚಿನಗಾರೀ | ೧೯೪೬ | ” |
| ೭. ಫೂಲೋ ಕಾ ಕುರ್ತಾ | ೧೯೪೯ | ” |
| ೮. ಧರ್ಮಯುದ್ಧ | ೧೯೫೦ | ” |
| ೯. ಉತ್ತರಾಧಿಕಾರೀ | ೧೯೫೧ | ” |
| ೧೦. ಚಿತ್ರ ಕಾ ಶೀರ್ಷಕ್ | ೧೯೫೧ | ” |
| ೧೧. ತುಮ್‌ನೇ ಕ್ಯೋಂ ಕಹಥಾ, ಮೈ ಸುಂದರ್ ಹೂಂ | ೧೯೫೪ | ” |
| ೧೨. ಉತ್ತಮಿ ಕೀ ಮಾಂ | ೧೯೫೫ | ” |
| ೧೩. ಓ ಭೈರವೀ | ೧೯೫೮ | ” |
| ೧೪. ಸಚ್ ಬೋಲ್‌ನೇ ಕೀ ಭೂಲ್ | ೧೯೬೨ | ” |
| ೧೫. ಖಚ್ಚರ್ ಔರ್ ಆದಮೀ | ೧೯೬೪ | ” |
| ೧೬. ಭೂಖ್ ಕೇ ತೀನ್ ದಿನ್ | ೧೯೬೮ | ” |
| ೧೭. ಲ್ಯಾಂಪ್ ಶೇಡ | ೧೯೭೯ | ಲೋಕಭಾರತಿ ಪ್ರಕಾಶನ,ಅಲಹಾಬಾದ್ |

## ಕಾದಂಬರಿಗಳು:

| | | |
|---|---|---|
| ೧೮. ದಾದಾ ಕಾಮ್ರೇಡ್ | ೧೯೪೧ | ವಿಪ್ಲವ್ ಕಾರ್ಯಾಲಯ, ಲಖನೌ |
| ೧೯. ದೇಶದ್ರೋಹೀ | ೧೯೪೩ | ” |
| ೨೦. ದಿವ್ಯಾ | ೧೯೪೫ | ” |
| ೨೧. ಪಾರ್ಟೀ ಕಾಮ್ರೇಡ್ | ೧೯೪೬ | ” |
| ೨೨. ಮನುಷ್ಯ ಕೇ ರೂಪ್ | ೧೯೪೯ | ” |
| ೨೩. ಅಮಿತಾ | ೧೯೫೬ | ” |
| ೨೪. ಝೂಠಾ ಸಚ್-ಭಾಗ ೧ | ೧೯೫೮ | ” |
| ೨೫. ಝೂಠಾ ಸಚ್-ಭಾಗ ೨ | ೧೯೬೦ | ” |
| ೨೬. ಬಾರಹ್ ಘಂಟೆ | ೧೯೬೩ | ” |
| ೨೭. ಅಪ್ಸರಾ ಕಾ ಶಾಪ್ | ೧೯೬೫ | ” |
| ೨೮. ಕ್ಯೋಂ ಫಂಸೇ | ೧೯೬೮ | ” |

೨೯. ಮೇರೀ-ತೇರೀ-ಉಸಕೀ ಬಾತ್ ೧೯೭೫ ”

**ನಾಟಕ:**

೩೦. ನಶೇ-ನಶೇ-ಕೀ ಬಾತ್ ೧೯೫೨ ”

**ಪ್ರಬಂಧಗಳು:**

೩೧. ನ್ಯಾಯ್ ಕಾ ಸಂಘರ್ಷ ೧೯೪೦ ”
೩೨. ಬಾತ್-ಬಾತ್-ಮೇಂ ಬಾತ್ ೧೯೫೦ ”
೩೩. ಜಗ್ ಕಾ ಮುಜರಾ
೩೪. ದೇಖಾ-ಸೋಚಾ-ಸಮುಝಾ ೧೯೫೧ ”
೩೫. ಚಕ್ಕರ್ ಕ್ಲಬ್ (ಆರನೆಯ ಆವೃತ್ತಿ)೧೯೬೩ ”

**ಪ್ರವಾಸ ವರ್ಣನೆಗಳು ಮತ್ತು ಸಂಸ್ಮರಣ:**

೩೬. ಸಿಂಹಾವಲೋಕನ ಭಾಗ-೧ ೧೯೫೧ ”
೩೭. ಸಿಂಹಾವಲೋಕನ ಭಾಗ-೨ ೧೯೫೨ ”
೩೮. ಸಿಂಹಾವಲೋಕನ ಭಾಗ-೩ ೧೯೫೫ ”
೩೯. ಬೀಬೀಜಿ ಕಹತೀ ಹೈಂ,
ಮೇರಾ ಚೆಹರಾ ರೋಬೀಲಾ ಹೈ ೧೯೫೯ ”
೪೦. ಲೋಹೇ ಕೀ ದೀವಾರ್ ಕೆ ದೋನೋ
ಓರ್ (ಎರಡನೆಯ ಆವೃತ್ತಿ) ೧೯೮೪ ಲೋಕ್‌ಭಾರತೀಪ್ರಕಾಶನ್ ಅಲಹಾಬಾದ್
೪೧. ರಾಹ್ ಬೀತೀ ೧೯೫೬ ವಿಪ್ಲವ್ ಕಾರ್ಯಾಲಯ್, ಲಖನೌ
೪೨. ಸ್ವರ್ಗೋದ್ಯಾನ್: ಬಿನಾ ಸಾಂಪ್ ೧೯೭೫ ”

**ಸಿದ್ಧಾಂತ ಗ್ರಂಥಗಳು:**

೪೩. ಮಾರ್ಕ್ಸ್‌ವಾದ್ ೧೯೪೦
೪೪. ಗಾಂಧೀವಾದ್ ಕೀ ಶವ್‌ಪರೀಕ್ಷಾ ೧೯೪೧
೪೫. ರಾಮರಾಜ್ಯ ಕೀ ಕಥಾ ೧೯೫೦

**ಭಾಷಾಂತರಗಳು:**

೪೬. ಪಕ್ಕಾ ಕದಮ್ ೧೯೪೯ ”
೪೭. ಚೀನೀ ಕಮ್ಯೂನಿಸ್ಟ್ ಪಾರ್ಟೀ ವಿವರ ತಿಳಿದಿಲ್ಲ
೪೮. ಜನಾನೀ ಡ್ಯೋಢೀ ”
೪೯. ಚಲನೀ ಮೇ ಅಮೃತ್ ”

೫೦. ಫಲಸ್ ,,

೫೧. ಜುಲ್ಮೇಸಾಂ ೧೯೬೦ ವಿಪ್ಲವ್ ಕಾರ್ಯಾಲಯ್

## ಯಶಪಾಲರ ಕೃತಿಗಳ ಮೇಲಿನ ವಿಮರ್ಶಾ ಗ್ರಂಥಗಳು:


೧. ಮಾರ್ಕ್ಸ್‌ವಾದೀ ಔರ್ ಯಶಪಾಲ್, ಪಾರಸನಾಥ್ ಮಿಶ್ರ, ಲೋಕಭಾರತೀ ಪ್ರಕಾಶನ, ಅಲಹಾಬಾದ್

೨. ಕ್ರಾಂತಿಕಾರೀ ಯಶಪಾಲ್, ಸಂ. ಮಧುರೇಶ್

೩. ಯಶಪಾಲ್ ಕೇ ಪತ್ರ, ಸಂ. ಮಧುರೇಶ್, ಮೇಕ್ ಮಿಲನ್, ದಿಲ್ಲೀ

೪. ಯಶಪಾಲ್ ಔರ್ ಮಾಣಿಕ್ ವಂದ್ಯೋಪಾಧ್ಯಾಯ್, ಸದಾಶಿವ್ ದ್ವಿವೇದಿ, ಪ್ರಾಸಂಗಿಕ್ ಪ್ರಕಾಶನ್, ದಿಲ್ಲಿ

೫. ಯಶಪಾಲ್: ವ್ಯಕ್ತಿತ್ವ ಔರ್ ಕೃತಿತ್ವ, ಸರೋಜ್ ಗುಪ್ತ

೬. ಯಶಪಾಲ್ ಔರ್ ಹಿಂದೀ ಸಾಹಿತ್ಯ, ಸುರೇಶ್‌ಚಂದ್ರ ತಿವಾರಿ

೭. ಕಲಮ್ ಕಾ ಸಿಪಾಹೀ, ಅಮೃತ್‌ರಾಯ್, ಹಂಸ್ ಪ್ರಕಾಶನ, ಅಲಹಾಬಾದ್

೮. ಯಶಪಾಲ್ ಕಾ ಕಥಾ ಸಾಹಿತ್ಯ -ಪ್ರಕಾಶ್‌ಚಂದ್ರ ಮಿಶ್ರ

೯. ಯಶಪಾಲ್ ಅಭಿನಂದನ್ ಗ್ರಂಥ್ -(ಸಂ.) ವಾ. ಪ್ರಸಾದ್